# ಮುನ್ನುಡಿ



ನನ್ನ ತರುಣ ಮಿತ್ರರಾದ ಪ್ರೊ. ಧಾರವಾಡಕರರು ತಮ್ಮ ಅನೇಕ-ಲೇಖನಗಳಿಂದ ಹಾಗು 'ಪತ್ರಿಕಾವ್ಯವಸಾಯ' ಮೊದಲಾದ ಪ್ರಕಟನೆಗಳಿಂದ ನಾಡಿನ ಸಹೃದಯರಿಗೆ ಸುಪರಿಚಿತರಾಗಿದ್ದಾರೆ. ವಿದ್ಯಾಪ್ರಿಯ ಪ್ರಾಧ್ಯಾಪಕರಾದ ಅವರು ಸಹೃದಯಪ್ರಿಯ ಸಾಹಿತಿಗಳೂ ವಿಮರ್ಶಕರೂ ಆಗುವದರಲ್ಲಿ ಸಂಶಯವಿಲ್ಲ. ನಾನು ವಿಲಿಂಗ್ಡನ್ ಕಾಲೇಜಿನಲ್ಲಿದ್ದಾಗ ಶ್ರೀ. ಧಾರವಾಡಕರರು ಇನ್ನೂ ವಿದ್ಯಾರ್ಥಿದೆಶೆಯಲ್ಲಿದ್ದರು. ವರುಣಕುಂಜದ ಸಾಹಿತ್ಯ ವಿನೋದಗಳಲ್ಲಿಯೂ ಆಗೀಗ ಅವರು ಭಾಗವಹಿಸುತ್ತಿದ್ದರು. ಆದರ ಸವಿನೆನಪಿನಿಂದಲೋ ಏನೋ ಅವರು ಈಗ ತಮ್ಮ ವಿಮರ್ಶೆಗಳ ಸಂಕಲನಕ್ಕೆ ಮುನ್ನುಡಿ ಬರೆಯುವ ಗೌರವವನ್ನು ನನಗೆ ಸಲ್ಲಿಸಿದ್ದಾರೆ. ಇದನ್ನು ಬರೆಯುವದರಲ್ಲಿ ಸಹಜವಾಗಿಯೇ ನನಗೆ ಅಭಿಮಾನ-ಸಂತೋಷಗಳಿವೆ. ಈ ವಿಮರ್ಶೆಗಳಗಿಂತ ಅವರ ತೀಕ್ಷ್ಣ ಬುದ್ಧಿ, ಸಹೃದಯತೆ ಹಾಗು ಸಜ್ಜನಿಕೆಗಳ ಹೆಚ್ಚಿನ ನಿದರ್ಶನ ಬೇಕಾಗಿಲ್ಲ. ಅವರ ವ್ಯಕ್ತಿತ್ವ ಇಲ್ಲಿ ಅಚ್ಚಳಿಯದೆ ಒಡಮೂಡಿದೆ.

ಶ್ರೀ ಧಾರವಾಡಕರರು ಉಭಯಭಾಷಾವಿಶಾರದರು. ಆಂಗ್ಲ ಸಾಹಿತ್ಯದಲ್ಲಿಯೂ ಅವರಿಗೆ ಕನ್ನಡ ಸಾಹಿತ್ಯದಲ್ಲಿಯಷ್ಟೇ ಅಭಿರುಚಿಯಿದೆ. 'ಹರಟೆ' ಹಾಗು 'ಯಶೋಧರ ಚರಿತೆ'ಯ ಮೇಲಿನ ಪ್ರಬಂಧಗಳನ್ನೋದಿ ಇದನ್ನು ನಾವು ಮನಗಾಣಬಹುದು. ಇತ್ತೀಚೆಗೆ ಕನ್ನಡದ ಪ್ರಾಧ್ಯಾಪಕರಾದ ಮೇಲೆ ಅವರ ಕನ್ನಡದ ಅಭ್ಯಾಸಕ್ಕೆ ಮೇಲುಗೈಯಾಗಿದೆ. ಅವರ ಇಂಗ್ಲೀಷು ನಿಬಂಧಗಳನ್ನೋದಿದ ನಾನು ಬಿ. ಎ. ಪರೀಕ್ಷೆಗೆ ಅವರು ಆಂಗ್ಲ ಸಾಹಿತ್ಯವನ್ನೇ ಐಚ್ಛಿಕ ವಿಷಯವಾಗಿ ತೆಗೆದುಕೊಳ್ಳಬೇಕೆಂದು ಹಟ ಹಿಡಿದಿದ್ದೆ. ಮುಗಳಿಯವರು ಕನ್ನಡಕ್ಕಾಗಿ ಅವರ ಮನವೊಲಿಸುತ್ತಿದ್ದರು. ಕೊನೆಗೆ ಮುಗಳಿಯವರೇ ಗೆದ್ದರು. ಆದರೆ ನಾನೂ ಸೋಲಲಿಲ್ಲವೆಂಬುದಕ್ಕೆ ಶ್ರೀ.

ಧಾರವಾಡಕರರ ವಿಮರ್ಶೆಗಳಲ್ಲಿಯು ನವೀನ ದೃಷ್ಟಿಯೇ ಸಾಕ್ಷಿಯಾಗಿದೆ. ಕನ್ನಡದ ಪಂಡಿತರು ಒಮ್ಮೊಮ್ಮೆ ಸನಾತನಿಗಳಾಗುವ ಸಂಭವವಿರುತ್ತದೆ. ಆದರೆ ಸಾಹಿತ್ಯದ ಚಿರಂತನ ಸ್ವರೂಪವನ್ನು ಕಂಡುಕೊಂಡಿದ್ದರೂ ಆಧುನಿಕ ತಾತ್ವಿಕತೆಯನ್ನು ಶ್ರೀ ಧಾರವಾಡಕರರು ಜತನಮಾಡಿಕೊಂಡಿದ್ದಾರೆ ಈ ನವೀನ ದೃಷ್ಟಿಯ ರಸಘಟ್ಟಿಗಳಾದ ಪಡುವಣದ ಅನೇಕ ಸಾಹಿತ್ಯಕೃತಿಗಳನ್ನು ಅವರು ಕೂಲಂಕಷವಾಗಿ ಅಭ್ಯಸಿಸಿದ್ದಾರೆ ಹೀಗೆ ಪಡುವಣದ ರಸಸಿಂಧುವಿನಲ್ಲಿ ಮಿಂದು ಮತ್ತೆ ಆರ್ಯಾವರ್ತದ ಚಿರಂತನ ತತ್ವಗಳ ಕಾಣ್ಕೆಯನ್ನು ಪಡೆದಾಗ ಇಲ್ಲಿ ಚಿಗುರಿರುವ ಸಾಹಿತ್ಯದೃಷ್ಟಿ ಪೂರ್ಣವಾದೀತು. ಈ ಪಲ್ಲಟದ ಪಲ್ಲವವೂ ಅಲ್ಲಲ್ಲಿ ಕಾಣಿಸಿಕೊಂಡಿದೆ.

ವ್ಯುತ್ಪತ್ತಿ, ಪ್ರತಿಭೆ ಇಲ್ಲವೆ ಒಂದು ಕೃತಿಯ ತಿರುಳನ್ನೇ ಕಂಡುಹಿಡಿಯುವ ತೀಕ್ಷ್ಣ ಬುದ್ಧಿ, ಹೆಚ್ಚಿನದನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆ, ಯಾವ ಪೂರ್ವಗ್ರಹಕ್ಕೂ ಅಂಟಿಕೊಳ್ಳಬಾರದೆಂಬ ವಿವೇಕ-ಪ್ರಜ್ಞೆ, ಇವಿಲ್ಲದೆ ಸಾಹಿತ್ಯವಾಗಲಿ ವಿಮರ್ಶೆಯಾಗಲಿ ಉನ್ನತಿ ಹೊಂದಲಾರದು. ಇಲ್ಲಿಯ ವಿಮರ್ಶೆಗಳ ಕೆಚ್ಚು ಮೇಲೆ ತೋರಿಸಿದ ಗಣಿಯಿಂದಲೇ ತಂದುದಾಗಿದೆ ತರುಣ ಉತ್ಸಾಹ ಅಲ್ಲಲ್ಲಿ ಹವಣುಮೀರಿದರೂ ಒಂದು ಸದೈವ ಜಾಗೃತ ಜಾಣ್ಮೆಗೆ ಅದು ಅಧೀನವಾಗಿದೆ ಅಂತೇ ಶ್ರೀ ಧಾರವಾಡಕರರು ಜನ್ನನ ಇಲ್ಲವೆ ಬಸವಣ್ಣನವರ ಮಹತಿಯ ತಿರುಳನ್ನು ನಿರಾಯಾಸವಾಗಿ ಗ್ರಹಿಸಬಲ್ಲರು. ಮುದ್ದಣನ ನವೀನ ದೃಷ್ಟಿಯನ್ನು ಒಡನೆ ಗುರುತಿಸಿ ಗೆರೆ ಎಳೆಯಬಲ್ಲರು. ರಾಮಾಶ್ವಮೇಧದ ಶೈಲಿಯಲ್ಲಿಯ ತಿರುಳನ್ನೂ ಜೊಳ್ಳನ್ನೂ ಬೇರ್ಪಡಿಸಬಲ್ಲರು ಮುದ್ದಣನ ಸೀತಾಪರಿತ್ಯಾಗದ ಕಥೆಯನ್ನು ಅನ್ಯ ಕವಿಗಳ ಚಿತ್ರಣದೊಡನೆ ಹೋಲಿಸಿ ನೋಡುವಲ್ಲಿ ಅವರ ವಿಮರ್ಶೆಯು ತುಲನಾತ್ಮಕ ರೀತಿ ಕಾಣುತ್ತದೆ. 'ಹರಟೆ' ವಿಮರ್ಶೆಯು ತತ್ವನಿರೂಪಣೆಯಲ್ಲಿ ಅವರಿಗಿರುವ ಸೌಲಭ್ಯವನ್ನು ಸೂಚಿಸುತ್ತದೆ ಸಾಹಿತ್ಯಪ್ರಗತಿಯ ಮೇಲಣ ಲೇಖನ ಒಂದು ಆಧುನಿಕ ಆಂದೋಲನವನ್ನು ಐತಿಹಾಸಿಕವಾಗಿ ಪರೀಕ್ಷಿಸುವ ಸಾಮರ್ಥ್ಯವನ್ನು ವ್ಯಕ್ತಗೊಳಿಸಿದರೆ 'ಏಕೀಕರಣ ಸಾಹಿತ್ಯ'ದ ಮೇಲಣ ಲೇಖನ ಒಂದು ಆಧುನಿಕ ಚಳವಳಿಯನ್ನು ಸಾಹಿತ್ಯದಲ್ಲಿಯ ಅದರ ಪ್ರತಿಬಿಂಬಕ್ಕೆ ಹೊಂದಿಸುತ್ತದೆ ಹೀಗೆ ವಿಮರ್ಶೆಯ ಅನೇಕಾನೇಕ ಪದ್ಧತಿಗಳನ್ನು ಹಸ್ತಗತ ಮಾಡಿಕೊಳ್ಳಲು ಶ್ರೀ ಧಾರವಾಡಕರರು ಮುಂದುವರಿದಿದ್ದಾರೆ.

ಇದೇ ವ್ಯಕ್ತಿತ್ವ ಹೀಗೆಯೇ ಕಹಿಯಿಡದೆ ಬೆಳೆದು ತನ್ನ ದೃಷ್ಟಿಯ ಪಾವಿತ್ರ್ಯವನ್ನು ಕಾಯ್ದುಕೊಂಡು ಇಂದಿನ ಮಂಜಿನಾಚೆ ಬೆಳಗುವ ಚಿರಂತನ ಚೆಲುವನ್ನು ಎವೆಯಿಕ್ಕದೆ ದೃಷ್ಟಿಸುತ್ತ ನಡೆದರೆ ಶ್ರೀ ಧಾರವಾಡಕರರಿಂದ ಕನ್ನಡದ ವಿಮರ್ಶೆಗೆ ಇನ್ನೂ ಹೆಚ್ಚಿನ ಕಾಣಿಕೆ ಸಂದೀತು. "ಕಣ್ಗೆ ಕಾಮನ ರಕ್ಷಿ, ಬೆನ್ಗೆ ಭೀಮನ ರಕ್ಷಿ, ಮುಂಗೈ ಮುರಾರಿ ರಕ್ಷಿ" ಎಂದು ನಾವು ಅಭಯವನ್ನು ಮಾತ್ರ ಕೋರಬಹುದು.

ವೀಸನಗರ

ಉತ್ತರ ಗುಜರಾಥ.

೧೫-೩-೧೯೪೯

ವಿ. ಕೃ. ಗೋಕಾಕ

# ಮೊದಲ-ಮಾತು

ಕನ್ನಡದ ಅಧ್ಯಯನ ಮತ್ತು ಅಧ್ಯಾಪನ ಕಾಲದಲ್ಲಿ ಇಂಥ ವಿಮರ್ಶಾ ಸಾಹಿತ್ಯದ ಕೊರತೆ ತುಂಬಾ ಎನಿಸಿತು. ಕವಿಯು ಕಾವ್ಯವನ್ನು ಮಾತ್ರ ರಚಿಸಿದರೆ, ಅದರಲ್ಲಿಯ 'ರಸ'ವನ್ನು ಕಾಣುವುದು ಸಹೃದಯನ ಕಾರ್ಯ. ರಸಪ್ರಪಂಚದಲ್ಲಿ 'ಇದಮ್ ಇತ್ಥಮ್' ಎಂಬುದು ಇಲ್ಲವಾದರೂ, ಹೆಚ್ಚು ಸಾರ್ವತ್ರಿಕವಾದ ಎನಿಸಿಕೆ ಎಂಬುದಾದರೂ ಇದೆ. ಆ ರೀತಿ ಇಲ್ಲಿಯ ಲೇಖನಗಳಲ್ಲಿಯ ಭಾವನೆಯು ಓದುಗರ ಮನಸ್ಸನ್ನು ಹಿಡಿಯಬಹುದೆಂದು ಭಾವಿಸಿದ್ದೇನೆ. ಇದರಲ್ಲಿಯ ಕೆಲವು ಲೇಖನಗಳು ಜಯಂತಿ, ಜೀವನ ಮತ್ತು ಜಯಕರ್ನಾಟಕ ಮೊದಲಾದ ಪತ್ರಿಕೆಗಳಲ್ಲಿ ಒಂದು ಸಲ ಪ್ರಕಟವಾಗಿದ್ದವು. "ಕನ್ನಡದಲ್ಲಿ ವಿಚಾರಸಾಹಿತ್ಯದ ಅಭಾವ" ಎಂಬುದು ಮೈಸೂರು ಆಕಾಶ-ವಾಣಿಯಿಂದ ಮಾಡಿದ ಒಂದು ಭಾಷಣ.

ಇಲ್ಲಿಯ ಹಲವು ಲೇಖನಗಳ ಧ್ವನಿಯನ್ನು ಸ್ವಲ್ಪ ಇಳಿಸಿದ್ದರೆ,— ಬಣ್ಣವನ್ನು ಸ್ವಲ್ಪ ತಿಳಿಮಾಡಿದ್ದರೆ,— ಚಿತ್ರ ಹೆಚ್ಚು ಸತ್ಯಪೂರ್ಣವಾಗಬಹುದಾಗಿದ್ದರೂ, ಮಾತಿನ ಸ್ಪಷ್ಟತೆ ಕಳೆಯಬಹುದಾದ್ದರಿಂದ ವಿಚಾರ್ಗಳನ್ನು ಹಾಗೇ ಇಡಲಾಗಿದೆ.

ಈ ಲೇಖನಗಳನ್ನು ಬರೆದಾಗ ಕಾಲಕಾಲಕ್ಕೆ ತಮ್ಮ ಸಲಹೆಗಳನು ಕೊಟ್ಟು ಉತ್ತೇಜನವಿತ್ತ ನನ್ನ ಗುರುಗಳಾದ ಪ್ರೊ. ರಂ. ಶ್ರೀ. ಮುಗಳಿ ಅವರಿಗೂ ಮತ್ತು ನನ್ನ ಮಿತ್ರರಾದ ಶ್ರೀ ನಾಡಗೀರ ಶಿವರಾಯರಿಗೂ ಕೃತಜ್ಞನಾಗಿದ್ದೇನೆ.

ನನ್ನ ಬಿನ್ನಹಕ್ಕೆ ಮನ್ನಣೆಕೊಟ್ಟು ತಮ್ಮ ಮುನ್ನುಡಿಯ ಮುಖಾಂತರ ಆಶೀರ್ವದಿಸಿದ ನನ್ನ ವಿದ್ಯಾಗುರುಗಳಾದ ಪ್ರಿ. ವಿ. ಕೃ. ಗೋಕಾಕ ಅವರಿಗೂ ನಾನು ಋಣಿ.

ಅದರಂತೆಯೇ, ಈ ಪುಸ್ತಕವನ್ನು ಪ್ರಕಟಿಸಿದ ಶ್ರೀ ಬಾಲಚಂದ್ರ ಘಾಣೇಕರ ಅವರಿಗೂ ನನ್ನ ಕೃತಜ್ಞತೆ ಸಲ್ಲಬೇಕು

೨೦-೩-೪೯
ಕೆ. ಈ. ಬಿ. ಕಾಲೇಜ
ಧಾರವಾಡ.

ಧಾ. ರಾ. ಮ.

# ಮಹಾತ್ಮಾ ಬಸವಣ್ಣನವರು



**" ಅರಿದರೆ ಶರಣ; ಮರೆದರೆ ಮಾನವ "**

೧೨ನೆಯ ಶತಮಾನವು ಕನ್ನಡ ನಾಡಿಗೂ ಉಳಿದ ಹಿಂದುಸ್ತಾನಕ್ಕೂ ಒಂದು ಹಿರಿಯ ವ್ಯಕ್ತಿಯನ್ನು ಒದಗಿಸಿ ಕೊಟ್ಟಿತು. ಬಸವಣ್ಣನವರ ಜೀವನವು ಒಂದು ಅದ್ಭುತರಮ್ಯ ಕಥೆ. ಅವರ ಆಶೆ-ಆಕಾಂಕ್ಷೆಗಳು ತೃಪ್ತಿ ಹೊಂದಿರಲಿ ಬಿಡಲಿ, ಅವರು ಕಟ್ಟಿದ ಕಣ ನೋಡುವಂತಹದು. ಮಾನವ್ಯವು ಯಾವಾಗಲೂ ಸೋಲು ಗೆಲವುಗಳ ಚವಲಿ ಪಾವಲಿಯ ಮೇಲೆ ಹಿರಿಯರ ಬೆಲೆಯನ್ನು ತೂಗಲಾರದು. ಸೋಲು ಮಹತ್ವದ್ದಲ್ಲ; ಕಾದಿದ ರೀತಿ, ಉದ್ದೇಶ ಮನನೀಯವಾದವು. ನಿನ್ನೆ ಸತ್ತವರನ್ನು ಇಂದು ಮರೆತು ನಾಳೆ ಹಳಿಯುವ ಕನ್ನಡ ಜನತೆಯೂ ಕೂಡ ಯಾವ ಹಿರಿಯ ವ್ಯಕ್ತಿಗೂ ಸಲ್ಲಿಸದಷ್ಟು ಮರ್ಯಾದೆಯನ್ನು ಬಸವಣ್ಣನವರಿಗೆ ಸಲ್ಲಿಸಿತು. 'ತನ್ನವರು ತನ್ನ ಹೊಗಳಿ ಹೊನ್ನ ಶೂಲದಲಿಕ್ಕಿದರೂ' ಜನತೆ ತನ್ನ ಕರ್ತವ್ಯವನ್ನು ಗೈದಿತು.

ಅಂತಲೇ ಬಸವಣ್ಣನವರು ಜೀವಿಸುತ್ತಿರುವಾಗಲೇ ಕಲ್ಯಾಣವು ಸುಮಂಗಲಪುರವಾಯಿತು. ಮೂಕರಿಗೂ ನಾಲಿಗೆ ಚಿಗುರಿತು. ಅನುಭವಮಂಟಪವು ಹೃದಯಸಮ್ಮೇಲನವಾಯಿತು. ಇದು ಆ ವ್ಯಕ್ತಿತ್ವದ ಗಾರುಡಿ; ಮಾಯೆ. ಆದುದರಿಂದ ಸುಮಾರು ೧೧೬೨ರಷ್ಟರಲ್ಲಿಯೆ ಬಸವಣ್ಣನವರು ನಂದೀಶ್ವರನ ಅವತಾರವೆನ್ನುವ ಕಲ್ಪನೆ ಸ್ಥಿರಗೊಂಡಿತು. ('ಪ್ರಭು ನಂದಿನಾಥನ ಮೊಗಮಂ ನೋಡಲ್ಕೆ ಸಂಗಮೇಶನ ಪುತ್ರಂ ಬಸವಯ್ಯ ಬಂದಂ' (೧೨೬೨) ಚೌಡದಾಮಪುರದ ಶಾಸನ). ೧೨೫೮-೯೧ರಷ್ಟರಲ್ಲಿಯೇ 'ಸಿರಿಯಾಳ್ದ ಬಾಣಾದಿಗಳ ಜೊತೆಗೆ ಭಕ್ತಸಂದೋಹದಲ್ಲಿ' ಬಸವಣ್ಣನವರಿಗೂ ಒಂದು ಗದ್ದುಗೆ ದೊರಕಿತು (ಅರಸಿಕೆರೆ ಶಾಸನ). ಗುಡಿಹಾಳ ಕುಂಟೋಜಿ ಗ್ರಾಮಗಳ ನಡುವೆ 'ಇದು ಬಸವರಾಜದೇವರ ಮಾನ್ಯ'ವೆಂದು ಗಡಿಕಲ್ಲು ನೆಡಲ್ಪಟ್ಟಿತು. ಗಬ್ಬಿ

ನಾಯುಕನೆಂಬವನು 'ಬಸವೇಶ್ವರರ ಮೂರ್ತಿಯನ್ನು' ಸ್ಥಾಪಿಸಿದನು) ಸೊರಟೂರ ಶಾಸನ; ಕಾಲ ಅನುಕ್ತ). ಇಂದಿಗೂ ಏಸೊ ಯುಗಗಳ ಕಂಠ ಸುತ್ತಿ ಸುಳಿದು ಬಂದ ಜಾನಪದ ಸಾಹಿತ್ಯದಲ್ಲಿ ನೀಲಾಂಬಿಕೆಯು ದೊರೆ ಬಸವಣ್ಣನ ನಾಲ್ಕು ಪಾದಗಳಿಗೂ ಶರಣು ದೊರೆಯುತ್ತವೆ. ಹರಿಹರನ ಕಾಲದಲ್ಲೇ ಬಸವಣ್ಣನವರ ಅನೇಕ ವಚನಗಳು ಮನೆಯು ಮಾತಾಗಿದ್ದವು, ನಿತ್ಯ ಗಾಥೆಯಾಗಿದ್ದವು (ಹರಿಹರ ಸ್ಥ. ೧೨, ಪು. ೮೨ '' ಓರ್ವ ಮಾಹೇಶ್ವರಂ ಪುರಾತನ ವಿರಚಿತ ಗದ್ಯಪದ್ಯಂಗಳಂ ಕೇಳಿಸುತ್ತಂ, ಬಸವರಾಜನ ಗೀತದೊಳು —ಬೇಡಿಬೇಡಿದ ಶರಣಂಗೆ— ಎಂಬ ಗೀತವುಂ ಪಾಡೆ" ಇ. )

ಇಷ್ಟೇ ಅಲ್ಲದೆ ಸಾಹಿತ್ಯದಲ್ಲಿಯೂ ಬಸವಣ್ಣನವರಿಗೆ ಹೆಚ್ಚಿನ ಪುರಸ್ಕಾರ ದೊರೆತಿದೆ. ಯಾವ ಕನ್ನಡ ಕವಿಯ ವಿಷಯವಾಗಿಯೂ ದೊರೆಯದಷ್ಟು ಗ್ರಂಥಗಳು ಬಸವಣ್ಣನವರ ವಿಷಯವಾಗಿ ದೊರೆಯುತ್ತವೆ. ೧೩ನೆಯ ಶತ ಮಾನದಲ್ಲೇ ಹರಿಹರ ಮಹಾಕವಿಯ ಬಸವರಾಜದೇವರ ರಗಳೆಯು ತನ್ನ ಮುಡಿಪನ್ನು ಸಲ್ಲಿಸಿತು. ಅದರ ಪೂಜೆ ಸಹ ಇನ್ನೂ ಸಾಗುತ್ತ ಬಂದಿದೆ. ಭೀಮಕವಿಯ ಬಸವಪುರಾಣವು ದೂರ ನಡೆದು ಬಂದುದಕ್ಕೆ ಜೀವನದಲ್ಲಿ ಕತೆ ಬೆರಸಿದರೂ ತನ್ನ ಕಾವ್ಯಶೈಲಿಯ ಮೂಲಕ ಬಸವಣ್ಣನವರಿಗೆ ಯೋಗ್ಯ ಕಾಣಿಕೆಯನ್ನೇ ಸಲ್ಲಿಸಿತು. ಹಾಗೇ ತೆಲಗು ಬಸವಪುರಾಣ, ಮಲಬಸವ ಚರಿತ್ರ, ಚೆನ್ನಬಸವ ಪುರಾಣ, ಪ್ರಭುಲಿಂಗಲೀಲೆ ಇವು ತಮ್ಮ ತಮ್ಮ ಆರತಿ ಯನ್ನೆತ್ತಿದವು. ಹೀಗಾಗಿ ಒಂದೇ ಎರಡೇ ಅನೇಕ ಚರಿತ್ರಗಳೂ ಮಹಾತ್ಮೆ ಗಳೂ ಗೀತೆಗಳೂ ಬಸವಣ್ಣನವರಿಗೆ—ಧವಲಾತಪತ್ರವನ್ನು ಎತ್ತಿಹಿಡಿದಿವೆ.

ಪ್ರೀತಿ ಅಭಿಮಾನಗಳು ಹೆಚ್ಚಾದಲ್ಲಿ ಮೂರ್ತಿಗಿಂತ ಆಭರಣಕ್ಕೆ, ಜೀವನಕ್ಕಿಂತ ಕಥೆಗೆ ಹೆಚ್ಚು ಬೆಲೆ ಬರುವದುಂಟು. ಆ ರೀತಿ ಅನೇಕ ಪವಾಡ ಗಳು ಬಸವಣ್ಣನವರ ನಿಜಜೀವನವನ್ನು ಮರೆಮಾಡಿಯೂ ಇವೆ. ಆದರೆ ಇಲ್ಲಿ ಗಮನಿಸಬೇಕಾದುದು ಅವರ ಹಿರಿತನದ ಒಪ್ಪಿಗೆ. ಬಸವಣ್ಣನವರ ಜೀವನವೇನು? ಅವರ ಸಾಧನೆ ಹೇಗೆ? ಅವರ ಆಶೆಯೇನು? ತತ್ವವೇನು? ನಿರ್ದಿಷ್ಟ ಬೆಲೆಯೇನು? ಎಲ್ಲವನ್ನೂ ಅರಿತುಕೊಳ್ಳೋಣ. ದೈವಿಕ ಜನ್ಮಕ್ಕೆ ನಮ್ಮಲ್ಲಿ ಪುರಸ್ಕಾರವಿಲ್ಲದಿರಬಹುದು. ಆದರೆ ಮಾನವ್ಯ ದೈವತ್ವ ಪಡೆಯಲಿ, ತಾರಕ ನಕ್ಷತ್ರವಾಗಲಿ, 'ಕೊನೆಗೆ ನಿಲ್ಲತಕ್ಕದ್ದು ಅಭಿಮಾನವಲ್ಲ, ಸತ್ಯ.'

ಈ ರೀತಿ ನೋಡಿದರೆ ಅಂದಿನ ಯುಗಕ್ಕಂತೂ ಬಸವಣ್ಣನವರು ಅವ

ತಾರಪುರುಷರಾಗಿಯೇ ಜನಿಸಿದರು. ೧೧-೧೨ನೆಯ ಶತಮಾನಗಳು ಹೇಗೆ ರಾಜಕೀಯ ಆಂದೋಲನದಿಂದ ಜರ್ಜರಿತವಾಗಿದ್ದವೋ ಹಾಗೆಯೇ ಧಾರ್ಮಿಕ ಕೋಳತದ ಮೂಲಕವೂ ಮ್ಲಾನವಾಗಿದ್ದವು. ಅನೇಕ ಯುಗಪುರುಷರು ಕಾಲ ಕಾಲಕ್ಕೆ ಚೈತನ್ಯವಿತ್ತಿದ್ದರೂ ವೈದಿಕ ಮತವು ಮಂದವೂ ಜಡವೂ ಆಗಿದ್ದಿತು. ಆತ್ಮದ ಹೋಮದಲ್ಲಿ ಶಾಸ್ತ್ರಕ್ಕೆ ಹಿರಿತನ ಬಂದಿದ್ದಿತು. ಭಕ್ತಿ, ನಿರ್ಮಲ ಜೀವನಗಳ ಬೆಲೆ ತಗ್ಗಿ ಬರಿಯ ಬಾಹ್ಯಕರ್ಮವು ಪ್ರಾಶಸ್ತ್ಯ ಹೊಂದಿದ್ದಿತು. ('ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ.'-ಬಸವಣ್ಣನವರ ವಚನ.)

ಎಲ್ಲ ಮತಗಳ ಹ್ರಾಸ-ಕಾಲದಲ್ಲಿಯಂತೆಯೇ ಆಚಾರ್ಯ ವರ್ಗವು ಸ್ವಯಂತೃಪ್ತವಾಗಿದ್ದಿತು. ವೈದಿಕಮತದ ಸ್ಥಿತಿ ಹೀಗಿರುವಾಗ ಶೈವಮತದ ಸ್ಥಿತಿಯೂ ಏನೂ ನೆಟ್ಟಗಿರಲಿಲ್ಲ. ಈಶ್ವರನ ಕೃಪಾಪೂರಿತ ಮೂರ್ತಿಯು ತಿರೋಹಿತವಾಗಿ ರುದ್ರನ ಘೋರಸ್ವರೂಪದ ಭಯಂಕರವಾದ ಆರಾಧನೆಯು ಅವಿರತವಾಗಿ ಸಾಗಿದ್ದಿತು. ಶಿವಕಂಕಾಳರಧರೂ ಮಲಧಾರಿಗಳೂ ನರಕಪಾಲ ಧರರೂ ಆದ ಕಾಪಾಲಿಕರೂ; ಭಸ್ಮಶಯನ ಆಕ್ರೋಶಯುಕ್ತ ಪಾಶುಪತರೂ, ಲಕುಲೀಶಕಾಳಾಮುಖರೂ ಶೈವದ ಪ್ರತಿನಿಧಿಗಳಾಗಿದ್ದರು. ಅಲ್ಲದೆ ಸದಾಚಾರಕ್ಕೆ ಬೆಲೆ ಕೊಟ್ಟ ಬೌದ್ಧರೂ ಕೂಡಾ ಅಧೋಗತಿಯ ಕಡೆಗೆ ಧುಮ್ಮಿಕ್ಕುತ್ತಿದ್ದರು. ಅವರ ಗ್ರಂಥಗಳಲ್ಲಿ "ಕನ್ಯಾಂತು ಸಾಧಯೇತ್ ನಿತ್ಯಂ ವಜ್ರಸತ್ವ ಪ್ರಯೋಗತಃ", "ಸ್ತ್ರೀಂದ್ರಿಯಂ ಚ ಯಥಾಪದ್ಮಂ ವಜ್ರಂ ಪುಂಸೇಂದ್ರಿಯಂ ತಥಾ" ಎಂಬ ವಾಕ್ಯರತ್ನಗಳೂ,

'ಚಂಡಾಲ ಕುಲಸಂಭೂತಾಂ ಡೊಂಬಿಕಾಂವಾ ವಿಶೇಷತಃ

ಜುಗುಪ್ಸಿತ ಕುಲೋತ್ಪನ್ನಾಂ ಸೇವಯನ್ ಸಿದ್ಧಿಮಾಪ್ನುಯಾತ್'

ಎಂಬ ನಿರ್ವಾಣ-ಸಾಧಕ ಉಪದೇಶಗಳೂ ರಾರಾಜಿಸಹತ್ತಿದುವು. (ಗುಹ್ಯ—ಸಮಾಜ ತಂತ್ರ) ಅಲ್ಲದೆ 'ಪವಿತ್ರ ಜೀವನವು ಕೀರ್ತಿಗಾಗಿ ಇರದೆ, ಅಂತರ್ದೃಷ್ಟಿ, ಜ್ಞಾನ ಮತ್ತು ನಿರ್ವಾಣಗಳಿಗಾಗಿ' ಎಂದು ಸಾರಿದ ಬುದ್ಧನ ಶಿಷ್ಯರ ದೃಷ್ಟಿಯಲ್ಲಿ ಬೇರೆ ಮೂರು ರತ್ನಗಳು ಹೊಳೆಯಹತ್ತಿದವು. (ಇತಿವೃತ್ತಕ) "ವೇಶ್ಯಾರತ್ನಂ ಸುರಾರತ್ನಂ ರತ್ನದೇವೊ ಮನೋಭವಃ ಏತದ್ ರತ್ನತ್ರಯಂ ವಂದೇ ಅನ್ಯತ್ ಕಾಚ ಮಣಿತ್ರಯಂ."

ಇಂತಹ ಕಾಲದಲ್ಲಿ ಪ್ರತಿಕ್ರಿಯೆಯು ತೀರ ಆವಶ್ಯಕವಾಯಿತು ·ಮತ್ತು ಅದರ ಭಾ- ಕವಚವು ಬಸವಣ್ಣನವರ ವಿಶಾಲ ಭುಜಗಳ ಮೇಲೆ ಬಿದ್ದಿತು.

ಹೀಗಾಗಿ ಬಸವಣ್ಣನವರ ವಚನಗಳಲ್ಲಿ ಕ್ರೂರವಾದ ಸಮಾಜವಿಮರ್ಶೆಯು ಅನಿವಾರ್ಯವಾಯಿತು ಕರ್ಮಜಂಜಡದಲ್ಲಿ ಸಿಲುಕಿ ಒದ್ದಾಡುತ್ತಿದ್ದ ವೈದಿಕರಿಗೆ 'ತೊರೆಯ ವೀವಣ್ಣಗಳಿರ ತೋರೆಯಿಂಭೋ' ಎಂದು ಉಪದೇಶಿಸಿದ್ದಲ್ಲದೇ ಸ್ವತಃ ತಾವೇ "ಕರ್ಮದ ಲತೆಯಂತಿರ್ದ ಜನ್ನಿವಾರಮಂ ಬಿಸುಟ" ದಾರಿ ಹಾಕಿ ತೋರಿದರು. ನಿಜವಾದ ಆತ್ಮಜ್ಞಾನವಿಲ್ಲದೆ ಕಂಚಿನ ದೈವವನ್ನು ನಂಬಿದವರಿಗೆ 'ಹೊತ್ತು ಬಂದಾಗ ಮಾರಿ ಎಂಬ ದೇವರು ದೇವರೇ?' ಎಂದು ಕೇಳಿದರು. ದ್ವೈತಾದ್ವೈತದ ಗರಡಿಮನೆಯ ವಾದಕ್ಕೆ ಕೊನೆಗೋಲು ನಿಲ್ಲಿಸಿದರು.

ರೂಢಿ ಸಂಪ್ರದಾಯದ ಮೂಲಕ ಬಲಿ ಬೇಡಿ ಕಾಡಿ, ಕಾಪಾಡದ ಮಾರಿ ಮಸಣಿಗಳನ್ನು ಹೀಗಳೆದರು. ಅಂತರ್ ಜ್ಞಾನವಿಲ್ಲದೇ ಬರಿಯ ಸ್ನಾನ ಜಪಗಳನ್ನು ಗೈಯುತ್ತಿದ್ದ ಕರ್ಮದ ವೈದಿಕರನ್ನು 'ನೀರ ಕಂಡಲ್ಲಿ ಮುಳಗಿ, ಮರವ ಕಂಡಲ್ಲಿ ಸುತ್ತಿ ಕೆನ್ನೆ ಕೆನ್ನೆ ಒಡೆದುಕೊಂಡರೆ ಪ್ರಯೋಜನವೇನು?' ಎಂದು ಕೇಳಿದರು. ಅವರ ಅರ್ಥಹೀನ ಮಂತ್ರ ಅವರ ಕೈಯಲ್ಲಿ ಮೊರೆಯುತ್ತಿದ್ದ ದರ್ಭದ ಮೊರೆಯ ಹಾಗೆಯೇ ನಿರುಪಯೋಗಿಯಾದುದು. ಅವರ ಭಕ್ತಿಯು 'ಓಡಿನೊಳಗೆ ಅಗೆಯ ಹೊಯ್ದಂತೆ.'

ಹೀಗಿರಲು 'ಲಿಂಗವಿದ್ದಲ್ಲಿ ಹೊಲೆಯುಂಟೇ?' 'ಜಾತಿವಿಡಿದು ಸೂತಕವ ನರಸುವರೆ?' 'ಜ್ಯೋತಿವಿಡಿದು ಕತ್ತಲೆಯ ನರಸುವರೆ?' ಎಂದು ಕೇಳಿದರು. ಮನುಷ್ಯನಲ್ಲಿ ಸಮ್ಯಗ್-ಜ್ಞಾನ ಭಕ್ತಿಗಳಿಲ್ಲದ ಹೊರತು ಯಾವ ಜಾತಿಗೆ ಸೇರಿದರೂ ಅಷ್ಟೇ. ಕಲ್ಲನಾಗರ ಪೂಜಿಸಿ ನಿಜನಾಗರ ಬರಲು ಹೊಡೆ ಎಂದು ಕೋಲು ಎತ್ತುವ' "ಅಗ್ನಿ ಮೀಡೇ ಪುರೋಹಿತಮ್" ಎಂದು, ಮನೆಗೆ ಬೆಂಕಿ ಬೀಳಲು ಬಚ್ಚಲ ನೀರನ್ನು ಹೊಯ್ಯುವ ವೈದಿಕರಲ್ಲಿ ದೇವತೆಗಳ ವಿಷಯವಾದ ಮೂಲದ ಕಲ್ಪನೆ ಉಳಿದಿರಲಿಲ್ಲ. ಇವೆಲ್ಲವನ್ನೂ ಬಸವಣ್ಣನವರು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದರು.

ಬಲಿಯ ಹೆಸರಿನಲ್ಲಿಯ ಪ್ರಾಣಿವಧೆಯಂತೂ ಬಸವಣ್ಣನವರಿಗೆ ಸಂತಾಪವನ್ನುಂಟು ಮಾಡಿತು. ಆದಕ್ಕಾಗಿ 'ಮಾತಿನ ಮಾತಿಂಗೆ ನಿನ್ನ ಕೊಂದಾರೆಂದು ಅಳು ಕಂಡೆಯಾ?' ಎಂದು ಹೋತಿಗೆ ಉಪದೇಶಿಸುತ್ತಾರೆ. ಹೀಗಾಗಿ ಅಂದು ನಿಜವಾಗಿ ಬೇಕಾದುದು ನಿಶ್ಚಿತ ಪರಮಾತ್ಮಸ್ವರೂಪ.

ಬರಿ ಕಂಚಿನ ಲೋಹದ ವಿಗ್ರಹಗಳೂ ಮಾರಿ ಮಸಣಿ ಕಲ್ಲುಗಳೂ ದೈವತ್ವ ಹೊಂದವು. ಅಂತಲೇ ಅವು ಕ್ರಮವಾಗಿ ಕೆಳಗಿಳಿಯಬೇಕಾಯಿತು.

ಆದರೆ ಬರಿಯ ಸಮಾಜವಿಮರ್ಶೆಗೇ ಅವರ ಪ್ರತಿಕ್ರಿಯೆ ನಿಲ್ಲಲಿಲ್ಲ. ಅವರು ತಮ್ಮ ಆತ್ಮವನ್ನೂ ಬಿಡದೆ ಅಷ್ಟೇ ಪರೀಕ್ಷಿಸಿದರು. ಮಾನವನಿಗೆ ಸಮಾಜ ಕಂಡರೂ ತನ್ನ ಬೆನ್ನು ತನಗೇ ಕಾಣಿಸದು. ಆದರೆ ಬಸವಣ್ಣನವರಿಗೆ ಈ ಅಂತರದೃಷ್ಟಿಯೂ ಪುಣ್ಯದಿಂದ ಲಭಿಸಿತು.

ಬಸವಣ್ಣನವರ ತತ್ವಜ್ಞಾನದಲ್ಲಿ ಈ ಭೂಮಿಗೂ ಸ್ವರ್ಗದಷ್ಟೇ ಬೆಲೆಯಿದ್ದರೂ, ( "ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ" "ಮೃತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ" 'ಸ್ವರ್ಗ ನರಕವೆಂಬುದು ಬೇರಿಲ್ಲವಯ್ಯಾ' 'ಕಾಯಕವೇ ಕೈಲಾಸ' ಇ.ಇ. ) ಮಣ್ಣಿನ ಮಾಯೆಗೆ ಅವರು ಬಹಳವಾಗಿ ಹೆದರಿದ್ದರು. ಅಂತಲೇ ಮಾನವ್ಯವನ್ನು ಉದ್ಧರಿಸಲು ಬಯಸಿದ ಅವರಿಗೆ ಸಂಸಾರವು ಹೇಯವಾಯಿತು. ಈ ಸಂಸಾರದ ಮಾಯೆಗಾಗಿ, ತುಂಬಿ ಹರಿದು ಬಂದು ಕೈನೀಡಿ ಕರೆವ ಪ್ರಲೋಭನಗಳಿಗಾಗಿ, ಅವರ ಎದೆ ನಡುಗಿತು. ಈ ಸಿರಿಯೆಲ್ಲ ಅವರ ಪ್ರಕಾರ ಶೂಲದ ಮೇಲಣ ವಿಭೋಗ. ರಂಜಕವಾದ ನೀರ ಬೊಬ್ಬುಳಿಕೆ. "ನಾನಾ ವರ್ಣದ ಸಂಸಾರ ಹಾವು-ಹಾವಡಿಗನ ಸ್ನೇಹದಂತೆ" ಅದನ್ನು ಜಾಗರೂಕವಾಗಿಯೇ ಸಾಧಿಸಬೇಕು. ನಂಬದೆ ನಂಬಿದಂತಿರಬೇಕು.

ಅಂತಲೇ ಅವರು 'ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ. ಇದನೆಚ್ಚಿ ಕೆಡಬೇಡ' ಎಂದು ಅನ್ಯರಿಗೆ ಹೇಗೋ ಹಾಗೇ ತಮ್ಮ ಆತ್ಮಕ್ಕೂ ಉಪದೇಶ ಮಾಡುತ್ತಿದ್ದಾರೆ. ನಿರ್ದಯವಾದ ಮಾಯೆಗಾಗಿ ಆಸತ್ತು "ದಿಟ ಪುಟ ಭಕುಭಕುವೆ ಸಂಪುಟ ನೆಲೆಗೊಳ್ಳದಾಗಿ ಟಿಂಬಕನ ನಾಡಿಸುತ್ತಿದ್ದಿತಯ್ಯ ಮಾಯೆ. ಹುಟ್ಟಿತ್ತೆ ತಪ್ಪಾಯಿತ್ತು" ಎಂದು ಹೇಳುತ್ತಾರೆ. ಅಂತಲೆ ಇದಕ್ಕಾಗಿ ಬಲ್ಲಿ ವಿಷಣ್ಣರಾಗಿ ಮೊರೆಯಿಡುತ್ತಿದ್ದಾರೆ:-

"ಸಂಸಾರ ಸಾಗರ ಹೇಳಾ, ಕಾಲುದ್ದವೆ ಹೇಳಾ, ಸಂಸಾರ ಸಾಗರಉರದುದ್ದವೆ, ಸಂಸಾರಸಾಗರ ಸಿರದುದ್ದವಾದ ಬಳಿಕ ಏನು ಹೇಳುವನಯ್ಯ ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯ." ಬಸವಣ್ಣನವರ ಈ ಆರ್ತತೆ ಮತ್ತು ಪ್ರಪತ್ತಿಗಳು ಅವರ ಅನೇಕ ವಚನಗಳಲ್ಲಿ ಕಂಡುಬರುತ್ತವೆ. ಹಲುಬುಗಟ್ಟ ಶಿಶು ತಾಯನರಸುವಂತೆ, ಬಳಿತಪ್ಪಿದ ಪಶು ತನ್ನ ಹಿಂಡನರಸುವಂತೆ,

ಸಂಸಾರದಲ್ಲಿ ಒರಲಾಡುತ್ತಿದ್ದ ಅವರು ಈಶ ಸಾನಿಧ್ಯಕ್ಕಾಗಿ ಹಲಬುತ್ತಿದ್ದಾರೆ. 'ಅಯ್ಯಾ, ಅಯ್ಯಾ ಎಂದು ಒರಲುತ್ತಿದ್ದೇನೆ; ಅಯ್ಯಾ, ಅಯ್ಯಾ ಎಂದು ಕರೆಯುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯಾ?' 'ಅಕಟಕಟ ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯಾ? ಪರಲೋಕ ದೂರನ........ಎನಗಾಗಿ ಮತ್ತೊಂದು ತರು-ಮರಾದಿಗಳಿರಲಿಲ್ಲವೆ?' ಎಂದು ಈಶ್ವರನಲ್ಲಿ ವಿನಮ್ರರಾಗಿ ಕೇಳುತ್ತಾರೆ ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸುವಂತೆ ಪ್ರಾರ್ಥಿಸುತ್ತಾರೆ. ಅನ್ಯ ವಿಷಯಗಳಿಗೆರಗದಂತೆ, ಆಳಿಮನದವನಿಗೆ ರಕ್ಷಣೆ ಕೊಡಲು ಕೇಳುತ್ತಾರೆ.

"ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ, ಸುತ್ತುಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ, ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ" ಎಂದು ಕೇಳುತ್ತಾರೆ. "ಯೋಗಕ್ಷೇಮಂ ವಹಾಮ್ಯಹಂ" ಎಂದು ಅನೇಕ ಸಲ ಅಭಿವಚನವಿತ್ತ ಪರಮಾತ್ಮನಿಗೆ ಅದರ ಅರಿವು ಮಾಡಿ ಕೊಡುತ್ತಾರೆ. "ಎನ್ನ ವಾಮಕ್ಷೇಮ ನಿಮ್ಮದಯ್ಯ, ಎನ್ನ ಹಾನಿ ವೃದ್ಧಿ ನಿಮ್ಮದಯ್ಯ, ಬಳ್ಳಿಗೆ ಕಾಯಿ ದಿಮ್ಮಿತ್ತೆ?"

ಅಂತಲೇ "ನೆರೆಕನ್ನೆಗೆ ತೆರೆಗಲ್ಲಕ್ಕೆ ಬಾರದ ಮುನ್ನ, ಶರೀರ ಗೂಡು ಓಗರವ ನ್ನ" ಪರಮಾತ್ಮನನ್ನು ಹೊಂದುವ ಇಚ್ಛೆ. ಅದಕ್ಕಾಗಿ "ಧೃತಿಗೆಟ್ಟು ಅನ್ಯರ ಬೇಡದಂತೆ, ಮತಿಗೆಟ್ಟು ಪರರ ಹೊಗಳದಂತೆ........ ಎನ್ನ ಪಾಲಿಸು." "ಕಾದಿ ಗೆಲಿಸಯ್ಯ ಎನ್ನನು" ಎಂದು ಬೇಡಿಕೊಳ್ಳುತ್ತಾರೆ. "ತಂದೆತಾಯಿ ನೀನು, ಬಂಧು ನೀನು, ಬಳಗ ನೀನು. ಮತ್ತಾರೂ ಇಲ್ಲವಯ್ಯ ಕೂಡಲಸಂಗಮದೇವ. ಹಾಲಲದ್ದು ನೀರಲದ್ದು." ಈಶ್ವರನ ಕೂಡ ಆಡಿ ಅವರ ಕಾಲು ದಣಿಯುವು, ನೋಡಿ ಕಣ್ಣು ದಣಿಯುವು, ಹಾಡಿ ನಾಲಿಗೆ ದಣಿಯದು. ಪರಮಾತ್ಮನ ನೆನೆದಾಗಲೇ ಅವರಿಗೆ ಉದಯ, ಮರಹಾದಾಗಲೇ ಅಸ್ತಮಾನ. ಆ ನೆನಹೇ ಅವರ ಜೀವನ. ('ಯಾನಿಶಾ ಸರ್ವಭೂತಾನಾಂ' ಎಂಬಂತೆ) "ತನು, ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ ಬೇರೆ ಮನವಿಲ್ಲ." ಈಶ್ವರ ಚಿಂತನೆಯೇ ಅವರ ನಿತ್ಯ ವ್ಯವಹಾರ.

"ಪರಚಿಂತೆ ಎಮಗೇಕಯ್ಯ? ಎಮ್ಮ ಚಿಂತೆ ನಮಗೆ ಸಾಲದೆ? ಕೂಡಲ ಸಂಗಯ್ಯ ಒಲಿದನೋ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು."

ಇಂತಹ ಪರಮಾತ್ಮನ ನೆರವಿಗಾಗಿ ಬಸವಣ್ಣನವರ ಆತ್ಮವು ಒಂದೇ ಸವನೆ ಮಿಡಿಯುತ್ತಿದೆ. ಅವನ ಬರವಿನ ಕಾಲುಸಪ್ಪಳವನ್ನು ಕೇಳುತ್ತಿದೆ. ಸುತ್ತಲಿದ್ದವರಿಗೆಲ್ಲ ನೆರವಾಗಲು, ಶುಭನುಡಿಯಲು ಬೇಡಿಕೊಳ್ಳುತ್ತಿದೆ. ತರಗೆಲೆ ಗಿರಿಕೆಂದೊಡೆ ಹೊರಗನಾಲಿಸುತ್ತಿದೆ.

"ಎಮ್ಮವರು ಬೆಸಗೊಂಡೊಡೆ ಶುಭಲಗ್ನವೆನ್ನಿರಯ್ಯಾ, ರಾಶಿ ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯಾ, ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯಾ, ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ" ಎಂದು ಈ ಮುತ್ತೈದಿಯ ಆತ್ಮ ಕಣ್ಣು ಹನಿದುಂಬಿ ಬೇಡಿಕೊಳ್ಳುತ್ತಿದೆ.

ಬಿಜ್ಜಳನ ಭಾಂಡಿರಿಯಾದರೂ ಬಸವಣ್ಣನವರಿಗೆ ತಮ್ಮ ಸಿರಿಯ ಅಸಮರ್ಥತೆ ಗೊತ್ತಿದೆ. ವಿಶ್ವತೋ ಚಕ್ಷು, ವಿಶ್ವತೋ ಮುಖನಾದವನಿಗೆ ಯಾವ ಆಭರಣ ಇಡಲು ಸಾಧ್ಯ? ಯಾವ ದೇವಾಲಯ ಕಟ್ಟಲು ಸಾಧ್ಯ? ಅಂತೆಯೇ ತಮ್ಮ ಅಸಮರ್ಥತೆಯನ್ನು ಒಪ್ಪಿಕೊಳ್ಳುತ್ತಾರೆ.

"ಉಳ್ಳವರು ಶಿವಾಲಯವ ಮಾಡಿಯಾರು, ನಾನೇನು ಮಾಡುವೆನಯ್ಯಾ? ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯಾ.... ಕೂಡಲಸಂಗಮದೇವ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ." ಅಂತಲೇ ಶೆಲಿ ಮಹಾಕವಿಯು ಪಡುವಣ ಗಾಳಿಯನ್ನು ಹೇಗೆ ಪ್ರಾರ್ಥಿಸಿದನೋ? (If I were a dead leaf thou Mightiest bear, If I were a swift cloud to fly with thee... Oh! lift me as a ware, a leaf, a cloud, I fall upon the thorns of life; I bleed.) ಹಾಗೆಯೇ ಬಸವಣ್ಣನವರು "Make me thy lyre even as the forest is" ಎಂಬ ಬೇಡಿಕೆಗೆ ಸಮನಾಗಿ "ಎನ್ನ ಕಾಯುವ ದಂಡಿಗೆಯ ಮಾಡಯ್ಯಾ, ಎನ್ನ ಶಿರವ ಸೋರೆಯ ಮಾಡಯ್ಯಾ, ಎನ್ನ ನರವ ತಂತಿಯ ಮಾಡಯ್ಯಾ, ಎನ್ನ ಬೆರಳಕಡ್ಡಿಯ ಮಾಡಯ್ಯಾ, ಬತ್ತೀಸ ರಾಗವ ಹಾಡಯ್ಯಾ, ಉರದಲೊತ್ತಿ ಬಾರಿಸು" ಎಂದು ಮೊರೆಯಿಡುತ್ತಾರೆ. ಉಜ್ವಲವಾದ ಪ್ರತಿಭೆ ಅರಿಯದೆಯೇ ಒಂದೇ ಮಾರ್ಗದಲ್ಲಿ ಪ್ರವಹಿಸುತ್ತದೆ ಎಂಬುದಕ್ಕೆ ಇದು ನಿದರ್ಶನವಾಗಿದೆ.

ಈ ಆರ್ತತೆಯ ಜೊತೆಗೆ ಬಸವಣ್ಣನವರಿಗೆ ತಮ್ಮ ಟೊಳ್ಳಿನ ಅರಿವೂ ಇದೆ. ತನ್ನವರು ತನ್ನ ಹೊಗಳಿದರೂ ತನ್ನರಿವು ತನಗೆ ಸಂಪೂರ್ಣವಾಗಿ

ಇದೆ. ಈ ಹೃದಯಪರೀಕ್ಷೆಯಲ್ಲಿ ಈ ಆತ್ಮಪೃಚ್ಛೆಯಲ್ಲಿ ಬಸವಣ್ಣನವರಷ್ಟು ಅರಿತವರು ಮತ್ತಾರೂ ಅರಿತವರಿಲ್ಲ.

ತಾವು ಭಕ್ತ, ಸಂಪೂರ್ಣ ವಿರಕ್ತನೆಂದು ಜನತೆ ಎಂದರೂ ತಮ್ಮ ಈ ಇಳಿಸಂಜೆಯ ಪ್ರಮಾಣದಲ್ಲಿಯ ಸ್ಥಾನಮಾನಗಳು ಅವರಿಗೆ ಸಂಪೂರ್ಣವಾಗಿ ಗೊತ್ತಿವೆ. ಅವರ ಆತ್ಮ ಊರ ಕೊನೆಯನ್ನು ಮುಟ್ಟಿರದೆ ಇನ್ನೂ ಯಾವದೋ ಮಾವಿನ ತೋಪಿನ ಬಳಿಯೋ, ದಾರಿಯ ಬದಿಯ ಬಾವಿಯ ಬದಿಯೋ ಇದ್ದದ್ದು ಅವರಿಗೆ ಗೊತ್ತಿದೆ. ಹೀಗಿರಲು ಆಚಾರ, ಧೈರ್ಯ, ಸ್ಥೈರ್ಯಗಳ ಮಾತೆಲ್ಲಿ?

"ಗರಿದೋರೆ ಗಂಡರೆಂಬುವರ ಕಾಣೆ, ನಿರಿ ಸೋಂಕಲು ಮುನಿ ಇಲ್ಲ ನೋಡಯ್ಯ, ನಂಟುತನವೇನವನ? ಬಂಟತನವೇನವನ ಹುಲ್ಲುಗಿಚ್ಚು ಹೊಲೆಯುನ ಮೇಳಾಪ." ತಾವು ಸತ್ಯಕ್ಕಾಗಿಯಲ್ಲದೆ ಎಷ್ಟೋ ಸಲ ಮಾತಿನ ಹಟಕ್ಕಾಗಿ ಹೋರುತ್ತಿದ್ದುದು ಅವರಿಗೆ ಗೊತ್ತಿದೆ. (ಒಂದು ಮಾತಿನ ಗಲ್ಲಕ್ಕೆ ಹಿಡಿದು ಹೋರುವೆ.) ಸ್ಥೈರ್ಯವೊ? ಅದಕ್ಕೆಯೇ ಬಸವಣ್ಣನವರು ಹೇಳುತ್ತಾರೆ:

"ಓಡಿ ಬೇಲಿವರಿದೆಂತೆನ್ನ ಮನವು ಹೊತ್ತಿಗೊಂದು ಪರಿಯಪ್ಪ ಗೋಸುಂಬಿಯಂತೆನ್ನ ಮನವು" ಎಂದು ಆಮಿಷದ ಕೀಳು ಹುಳ ಇನ್ನೂ ಎದೆಯ ಹೂವನ್ನು ಕೊರೆಯುತ್ತಿದೆ.

"ಊರ ಸೀರೆಗೆ ಅಗಸ ಬಡಿಬಡೆದಂತೆ, ಹೊನ್ನೆನ್ನದು ಮಣ್ಣೆನ್ನದು ಎಂದು ಮರುಳಾದೆ. ನಿಮ್ಮನರಿಯದ ಕಾರಣ' ಅಲ್ಲದೇ ಬಿಜ್ಜಳನ ಭಾಂಡಾರಿಯು ಭಕ್ತಿಭಾಂಡಾರಿಯು. ಭಕ್ತಿಭಾಂಡಾರಿಯೂ ಆದ ಬಸವಣ್ಣನವರಿಗೆ? ಈಶ್ವರನಿಗೆ ಬೇಕಾಗುವ ಭಕ್ತಿಯ ತೂಕ ಗೊತ್ತಿದೆ. ಜನತೆ ಮರಳಾದರೇನು? ಇರಿಯದ ವೀರ ಇಲ್ಲದ ಸೊಬಗ ಹೇಳಿ ಏನೂ ಪ್ರಯೋಜನವಿಲ್ಲ. ಹೊರಿಸಿಕೊಂಡು ಹೋದ ನಾಯಿ ಮಲ ಹಿಡಿಯುವದೆ? ಅಂತಲೇ ಬಸವಣ್ಣನವರು

"ಆನು ಭಕ್ತನಲ್ಲಯ್ಯ. ಆನು ವೇಷಧಾರಿಯಯ್ಯ. ಎನ್ನಲ್ಲಿ ಭಕ್ತಿ ಸಾಸ್ವೆಯ ಷಡುಭಾಗ ದಿನಿತಿಲ್ಲ." ಎಂದು 'ಏತ ತಲೆವಾಗಿದರೇನು? ಗುರು ಭಕ್ತನಾಗಬಲ್ಲುದೆ?' ಎಂದು ಕೇಳುತ್ತಾರೆ. ಅವರ ಪ್ರಕಾರ ಒಲವಿಲ್ಲದ ಬರಿಯ ಆಚಾರ ಚಿತ್ರದ ರಬ್ಬು. ಅಂತಲೇ ಅಂತರಂಗಶುದ್ಧಿಯನ್ನು ಸಾಧಿಸಿದ

ಹೊರತು ದಿಟ ಪುಟ ಭಕ್ತಿ ನೆಲೆಗೊಳ್ಳದೆಂದು ಅವರಿಗೆ ಸಂಪೂರ್ಣವಾಗಿ ಗೊತ್ತಿದೆ. ಹಾವುಮೆಕ್ಕಿನಕಾಯಿ ಬಾತು ಫಲವಾದರೆ ಯಾತ ಉಪಯೋಗ ? "ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿಕಾಳಕೂಟ." ಆದ್ದರಿಂದ ಪ್ರತಿಯೊಬ್ಬರೂ ತಮ್ಮ ತಮ್ಮ ತನುವ ಸಂತೈಸಿಕೊಳ್ಳಬೇಕು. ಮನವ ಸಂತೈಸಿಕೊಳ್ಳಬೇಕು. ನಮ್ಮ ಮನೆಯಲ್ಲೇ ಹೆಣ ಬಿದ್ದಿರಲು ಅನ್ಯರ ಮನೆ ಕಳವಾದುದಕ್ಕೆ ಅತ್ತೇನು ಪ್ರಯೋಜನ?

'ಲೋಕದ ಡೊಂಕ ನೀವೇಕೆ ತಿದ್ದುವಿರಿ?' 'ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ' ಅದಕ್ಕಾಗಿ ಇಲ್ಲಿ ಸಂದು ಅಲ್ಲಿಯೂ ಸಲ್ಲಬೇಕು. "ಮೃತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು", "ದೇವಲೋಕ ಮೃತ್ಯಲೋಕ ಬೇರಿಲ್ಲ ಕಾಣಿರೋ", "ಸತ್ಯವ ನುಡಿವುದೇ ದೇವಲೋಕ", "ಆಚಾರವೇ ಸ್ವರ್ಗ, ಅನಾಚಾರವೇ ನರಕ"–ಇದನ್ನರಿತು ಮನುಷ್ಯನು ಶುದ್ಧಿಗಾಗಿ ಯತ್ನಿಸಬೇಕು. ಈ ಅಂತರಂಗಶುದ್ಧಿಗಾಗಿ ಬಸವಣ್ಣನವರೂ ನಾಲ್ಕಾರು ಸೂತ್ರಗಳನ್ನು ನಿರ್ಮಿಸಿಕೊಂಡಿದ್ದಾರೆ. ಅದನ್ನು ತಮ್ಮ ಆತ್ಮಕ್ಕೆ ಕ್ಷಣಕ್ಷಣಕ್ಕೆ ಹೇಳುತ್ತಾರೆ.

'ದಯವೇ ಧರ್ಮದ ಮೂಲವಯ್ಯ' 'ಕಂಗಳು ತಪ್ಪಿ ನೋಡಿದರೆ ಮಾರಿ' 'ಕೋಪವಂತೂ ಅಂತರಂಗಶುದ್ಧಿಗೆ ತೀರ ವಿಘಾತಕವಾದುದು.' 'ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ.' ಬಸವಣ್ಣನವರು ಇದಕ್ಕೂ ಶಕ್ತಿಯುತವಾಗಿ ಹೇಳಿದ್ದಾರೆ.

'ತನಗೆ ಮುನಿವದರಿಗೆ ತಾ ಮುನಿಯಲೇಕಯ್ಯ? ತನಗಾದಡೇನು? ಅವರಿಗಾದಡೇನು? ತನುವಿನಕೋಪ ತನ್ನಹಿರಿಯತನದ ಕೇಡು' ಅಂತಲೇ ಏನಾದರೂ ಕೂಡಾ ಶರಣರು 'ನೊಂದು ಸೈರಿಸಬೇಕು.' ಇದನ್ನು ಇದಕ್ಕೂ ಸ್ಪಷ್ಟವಾಗಿ ಹೀಗೆ ಹೇಳುತ್ತಾರೆ. "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ ತನ್ನ ಬಣ್ಣಿಸಬೇಡ ಇದಿರು ಹಳಿಯಲುಬೇಡ ಇದೇ ಅಂತರಂಗಶುದ್ಧಿ ಇದೇ ಬಹಿರಂಗಶುದ್ಧಿ" ಈ ಶುದ್ಧಿಯನ್ನು ಸಾಧಿಸಲಿಕ್ಕೆ 'ಸತ್ಯದ ನಿಲವನರಿಯದೆ' 'ಆನೆಯನೇರಿ

ಕೊಂಡು ಹೋದ" ಮಹಾಜನಗಳಿಗೆ ಸತ್ಯವನ್ನರಿಯಲು ಬಸವಣ್ಣನವರು ಬಿನ್ನವಿಸಿಕೊಳ್ಳುತ್ತಾರೆ.

ಆದರೇನು ಈಶ್ವರನೊಲಿಯದ ಹೊರತು ಎಷ್ಟು ಪ್ರಯತ್ನಿಸಿದರೂ ಸಾಧ್ಯವಿಲ್ಲ. "ನೀನೊಲಿದರೆ ಕೊರಡು ಕೊನರುವದಯ್ಯಾ. ನೀನೊಲಿದರೆ ಬರಡು ಹಯನಹುದಯ್ಯಾ. ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ. ಸಕಲ ಪಡಿಪದಾರ್ಥ ಇದರಲ್ಲಿಪ್ಪವು." ಇಂತಹ ಪರಮಾತ್ಮನ ಸಾಧನೆಗೆ ಮಾರ್ಗತ್ರಯಗಳಲ್ಲಿ ಬಸವಣ್ಣನವರಿಗೆ ಭಕ್ತಿಯೇ ಸರಿ ಎನಿಸಿತು. ಜ್ಞಾನ, ಸತ್ಯದ ನಿಲವು, ಆಚಾರ ಮತ್ತು ವಿರಕ್ತಿಗಳ ಬಗ್ಗೆ ಅವರು ಅಲ್ಲಲ್ಲಿ ಹೇಳಿದ್ದರೂ ಅವರ ಪ್ರಕಾರ ಐಕ್ಯದ ನಿಶ್ಚಿತ ಮಾರ್ಗವು ಭಕ್ತಿಯೇ. ಅವರ ಕಾಲದಲ್ಲಿ ಕಲ್ಯಾಣ ನಗರವು ಭಕ್ತರಿಂದ ತುಂಬಿತು. ಹರಿಹರನ ರಗಳೆಯಲ್ಲಿ ಹೇಳುವಂತೆ ದಿನವೂ ಸಾವಿರಾರು ಜನ ಬಸವನಲ್ಲಿ ಆರೋಗಣೆ ಪಡೆದರು. ಹರಿಹರನ ರಗಳೆಯಾದರೂ ಈ ಅಂಶವನ್ನೇ ವಿಶೇಷವಾಗಿ ಎತ್ತಿ ತೋರಿಸುತ್ತದೆ. ಆದ್ದರಿಂದ ಬಸವಣ್ಣನವರು ತಮ್ಮ ಭಕ್ತಿ ಸ್ವರೂಪವನ್ನು ವಚನಗಳಲ್ಲಿ ಸ್ಪಷ್ಟವಾಗಿ ತೋರಿಸಿದ್ದಾರೆ.

"ಭಕ್ತರೇ ಸಮರ್ಥರು, ಚೆನ್ನನೆತ್ತ? ಚೋಳನೆತ್ತ? ಚೆನ್ನನೊಡನುಂಡ ಶಿವ. ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ ಕೂಡಲ ಸಂಗಮದೇವ ಭಕ್ತಿಲಂಪಟನಯ್ಯಾ" ಬಸವಣ್ಣನವರ ಪ್ರಕಾರ ಭಕ್ತರ ಸಂಗವೂ ಕೂಡ ಶ್ರೇಯಸ್ಕರವಾದುದು. "ಅರಸರ ಮನೆಯಲ್ಲಿ ಅರಸಿಯಾಗಿರುವದಕ್ಕಿಂತ ಭಕ್ತರ ಮನೆಯಲ್ಲಿ ದಾಸಿಯಾಗಿರುವದು ಲೇಸು."

ಬಸವಣ್ಣನವರ ವ್ಯಾವಹಾರಿಕ ತತ್ವಜ್ಞಾನದ ಪ್ರಕಾರ ಭಕ್ತಿಪಾರಮ್ಯಕ್ಕೆ ಕಾರಣಗಳೂ ಇವೆ. ಈ ಮಣ್ಣಿನ ದೇಹದಲ್ಲಿ ಉಸಿರು ತೂಗುವವರೆಗೂ ದೇಹವನ್ನು ಸಂಪೂರ್ಣವಾಗಿ ಬದಿಗಿರಿಸಿ ಸನ್ಯಾಸವನ್ನು ಸ್ವೀಕರಿಸುವದು ಸಾಧ್ಯವಿಲ್ಲ. ಕಾಯವಿದ್ದ ಮೇಲೆ ಕಾಯಕ್ಕಂಟಿದ ಆಮಿಷಗಳೂ ಇರುವದು ಸ್ವಾಭಾವಿಕ.

"ಒಲಿವೆನೆಂಬುದು ಕಾಯಗುಣ" ಅಂದ ಮೇಲೆ ಅದರ ನಿಗ್ರಹ ದುಃಸಾಧ್ಯವೇ! "ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು" ಸಿಂಧುಬಲ್ಲಾಳನು ರತಿಸುಖ ಭೋಗವನ್ನು ಬಿಟ್ಟನೇ? ಆದುದರಿಂದ ಬಂದುದ ಲಿಂಗಾರ್ಪಿತವ

ಮಾಡಿ ಭೋಗಿಸಬೇಕು. ಪ್ರಸಾದ ಕಾಯುವ ಕೆಡಿಸಲಾಗದು. ಇಂದ್ರಿಯ ನಿಗ್ರಹವು ಪರಿಹಾರೋಪಾಯವಾಗದು.*

"ತನುವ ನೋಯಿಸಿ ಮನವ ಬಳಲಿಸಿ ನಿಮ್ಮ ಪಾದವ ಹಿಡಿದವ ರೊಳರೆ? ಈ ನುಡಿ ಸುಡದಿಹುದೇ?" ಎಂದು ಅವರಸವಾಲು ಅಲ್ಲದೆ ಈ ಸನ್ಯಾಸಕ್ಕೆ ಪರಮಾತ್ಮನಲ್ಲಿ ಅಚಲವಾದ ಭಕ್ತಿ ಇರದ ಹೊರತು ಸ್ಥಿರತೆ ಹೇಗೆ?

ಅವರ ಪ್ರಕಾರ ಭಾವನಾರಹಿತ ಶುಷ್ಕ ಜ್ಞಾನಕ್ಕಂತೂ ಬೆಲೆಯೇ ಇಲ್ಲ. ಅದು ಬೆಂಕಿಯ ಪಿಂಡವಿದ್ದಹಾಗೆ ಹಿಡಿದತ್ತ ಸುಡುವದು. ಇಂತಹ ಜ್ಞಾನವೇ ಅಲ್ಲವೇ ಹೋತನ್ನು ಒರಲಿಗೆ ನೂಕುವುದು? ನಿಜ; ಸತ್ಯದ ನಿಲುವಕಂಡಿರ ಬೇಕು. ಆದರೆ, ಅಲ್ಲಿಯೇ ನಿಲ್ಲಲಾಗದು. ಆದ್ದರಿಂದ ಅವು ಪ್ರಕಾರ ಭಕ್ತಿಗೇ ಪ್ರಾಧಾನ್ಯ. ಅಲ್ಲದೆ ಐತಿಹಾಸಿಕ ಕಾಲದಲ್ಲೂ ಕೂಡ ಭಕ್ತಿಯ ಮೂಲಕ ಐಕ್ಯವನ್ನು ಹೊಂದಿದವರ ದೃಷ್ಟಾಂತಗಳು ಹೇರಳವಾಗಿವೆ. ಅಂತಲೇ ಬಸವಣ್ಣನವರು ಭಕ್ತಿಯನ್ನು ಬೋಧಿಸಿದರು. ಮತ್ತು 'ಹನುಮ ನುದಿಸಿದ' ಈ ನಾಡಿನಲ್ಲಿ ಭಕ್ತಿಯು ಪರಿಪೂರ್ಣತೆಯನ್ನು ಹೊಂದಿತು, ವೃದ್ಧಿಂ ಕರ್ನಾಟಕೇ-ಗತಾ'

(೧) ಬಸವಣ್ಣನವರ ಭಕ್ತಿಯಲ್ಲಿ ಮುಖ್ಯವಾಗಿ ಅವಶ್ಯವಿದ್ದುದು ತನ್ನ ಅಪೂರ್ಣತೆಯ ಅರಿವು. ಸಂತೃಪ್ತ ಮನೋಭಾವವು ಭಕ್ತನಲ್ಲ ಸಾಗದು. ಬಸವಣ್ಣನವರು ತಮ್ಮ ಭಕ್ತಿಯ ಅಪೂರ್ಣತೆಯನ್ನು ಪದೇ ಪದೇ ಹೇಳು ತ್ತಾರೆ.

"ಭಕ್ತಿ ಇಲ್ಲದ ಬಡವನಾನಯ್ಯ, ಕಕ್ಕಯ್ಯನ ಮನೆಯಲ್ಲೂ ಬೇಡಿದೆ

---

* ಈ ವಿಷಯದಲ್ಲಿ ಆಧುನಿಕ ಅಭಿಪ್ರಾಯವೂ ಹೀಗೆಯೇ ಇದೆ.

"These instincts (Suppressed sex) still slumber in every one." Havelock Ellis (Psychology of Sex) "(Sex) which while blood burns, as blood only can burn, demands degration and dirt...... for becoming greater & purer." T. P. Jakobson (ಬಸವನ ಸಾಧಾರಣ ಭಾಷಾಂತರ) "Sexual instinct is a biological instinct which it is not always safe to repress" Major Basu; Relation of the Sexes

ದಾಸಯ್ಯನ ಮನೆಯಲ್ಲೂ ಬೇಡಿದೆ............ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವನ್ನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು." ಪುನಃ,"ಎನ್ನಲ್ಲಿ ಭಕ್ತಿ ಸಾಸಿವೆಯ ಷಡ್ಭಾಗದಿನಿತಿಲ್ಲ....... ....ಬೆಳೆಯದ ಮುನ್ನವೇ ಕೊಯ್ವರೆ ಹೇಳಾ ?" "ಎನ್ನವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ ಎನ್ನ ಹೊಗಳತೆ ವ್ಯೆಗೊಂಡಿತಲ್ಲ....... ....ನೀನೊಳ್ಳಿದನಾದರೆ ಎನ್ನ ಹೊಗಳತೆ ಗಡ್ಡಬಾರಾಧರ್ಮಿ"

(೨) ಅಲ್ಲದೆ ಅವರ ಅಭಿಪ್ರಾಯದಲ್ಲಿ ಹಮ್ಮು ನಿರ್ದಾಕ್ಷಿಣ್ಯವಾಗಿ ಹೋಗಲೇಬೇಕು. ನಾನು ಹೋದರೆ, ನಾರಾಯಣನು ಬರುವನಲ್ಲವೇ ? ಅದಕ್ಕಾಗಿ ಬಸವಣ್ಣನವರು 'ಸೋಹಂ' ಎಂದೆನಿಸದೆ. 'ದಾಸೋಹಂ' ಎಂದೆನಿಸಯ್ಯ ಎಂದು ಹೇಳಿಕೊಳ್ಳುತ್ತಾರೆ. ಹರಿಹರ ಮಹಾಕವಿಯು ಬಸವಣ್ಣನವರ ವ್ಯಕ್ತಿತ್ವದ ಈ ಭಾಗವನ್ನು ಸುಂದರವಾಗಿ ಚಿತ್ರಿಸಿದ್ದಾನೆ. ಸ್ಥಲ ೪-ಸು ೨೧ರಲ್ಲಿ ಸಂಗನ ಬಸವನು ಮಂಗಳವಾಡಕ್ಕೆ ಹೋಗೆನ್ನಲು ಬಸವನಲ್ಲಿ ಉಂಟಾದ ಮನೋಭಾವವನ್ನು ರಜತ ಚಿತ್ರದಮೇಲೆ ತೋರಿಸು ವಂತೆ ಕವಿತೋರಿಸಿದ್ದಾನೆ. "ದೇವ ದೇವ ಸಂಗ.........ಗಗನದಿಂದಿಳಿವಂಗೆ ಆಧಾರವಾಗುತ್ತೆ ತಪ್ಪುವರೆ ? ತೆಪ್ಪಗಾಗುತ್ತ ಪಿಂಗುವರೆ ? ಹೊದ್ದಿದರಂ ಹೋಗೆಂಬರೆ ? ಶಿಶುವನಿರಿವರೆ ? ನಂಬಿದವರ ಗೋಣಂ ಕೊಯ್ವರೆ ? ಕರುಣಿ ಕರುಣಿ, ಅರ್ಚಿಸತಕ್ಕೆ ಲೇಸಾಯ್ತು" ಇತ್ಯಾದಿ.

ಬಸವಣ್ಣನವರೂ ಕೂಡ ತಮ್ಮ ವಚನಗಳಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ 'ಕೀಳಿಂಗಲ್ಲದೆ ಹಯನು ಕೂಡ ಕರೆಯುವದಿಲ್ಲ ವೆಂದಬಳಿಕ ಪರಮಾತ್ಮನು ಒಲಿಯುವನೇ ?

"ಮೇಲಾಗಿ, ನರಕದೊಳೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿಸು" ಅವರಿಗೆ ಬ್ರಹ್ಮಪದವಿ ಬೇಡ; ವಿಷ್ಣುಪದವಿ ಬೇಡ; "ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯೊಂದಿದ್ದರೆ ಸಾಕು" ಎಂದು ಅವರ ವಚನ.

"ವಯಂತು ಶಿವಭಕ್ತಾನಾಂ ಪಾದುಕಸ್ಯಾವಲಂಬನಂ" ಅದಕ್ಕಾಗಿ ಅವರು ಬಾಗಿ, ಬೆಳೆದ ಬಾಳೆಯಂತೆ ಬಿದಿರಿನಂತೆ, ಇದ್ದಾರೆ. ಹಮ್ಮು ಕೂಡಿದ ಭಕ್ತಿ ಬೂದಿಯಲ್ಲಿ ಹೋಮಮಾಡಿದಂತೆ.

" ಎಳ್ಳಿಲ್ಲದ ಗಾಣನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ " ಅನುಮಾಡಿದೆ ನೆಂಬ ಕಿಚ್ಚು ಸಾಲದೇ ? ಇದು ಪಾರ್ಥನ 'ಶಿಷ್ಯಸ್ತೆ ಹಂ' ಭಾವಕ್ಕೆ ತೀರ ಅನುಗುಣವಾದುದು.

(೩) ಭಕ್ತಿಗೈಯ್ಯುವಲ್ಲಿ ಹಮ್ಮು ಹೇಗೆ ಹೊಲ್ಲವೋ ಹಾಗೇ ಉದಾಸೀನವೂ ಹೊಲ್ಲ. ಬಸವಣ್ಣನವರ ಭಕ್ತಿಮಾರ್ಗವು ಗೀತೆಯ ಭಕ್ತಿ ಮಾರ್ಗದಿಂದ ಎಷ್ಟೋ ಸ್ವೀಕರಿಸಿದೆ. ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಸಂಶಯವನ್ನು ದೂರೀಕರಿಸಲು ' ಮನ್ಮನಾಭವ ಮದ್ಭಕ್ತೊ ಮದ್ಯಾಜಿ ಮಾಂ ನಮಸ್ಕುರು ' " ಶ್ರದ್ಧಾವಾನ್ ಭಜತೇ ಯೋಮಾಂ ಸಮೆಯುಕ್ತತಮೋಮತಃ " ಎಂದು ಉಪದೇಶಿಸಿದಂತೆ, ಬಸವಣ್ಣನವರೂ ಉಪದೇಶಿಸುತ್ತಾರೆ. " ಕರ್ಮಸ್ಥಿತಿ ಎನ್ನ ಬೆನ್ನು ಬಿಡದು, ನಿಮಿಷದ ಉದಾಸೀನ ಕೆಡಿಸಿತ್ತು. " ಅವರ ಪ್ರಕಾರ ಮನವಂಚನೆಯೇ ಅನ್ಯ ಲಿಂಗಾರ್ಚನೆ, ಒಮ್ಮೆ ನಂಬಿ ಪೂಜಿಸಹತ್ತಿದ ಮೇಲೆ ತಿರುಗಿ ಹೋಗಲಾಗದು. ಅದು ' ಹೊಸತೈಲ ಪೂಜಿಸಿ ಹೊರಹೊಂಟ ಹೋಗಿ, ಅದನ್ನೇ ತುಳಿದ ಒಕ್ಕಲತಿಯ ಭಕ್ತಿ. " ಚೇಳಿಂಗೆ ಬಸುರಾಯಿತ್ತೆ ಕಡೆ........ಮಾಡುವ ಭಕ್ತರಿಗೆ ಮಾನಹೀನವಾದರೆ ಅದೇ ಕಡೆ. ನಂಬಿದರೆ ಪ್ರಸಾದ, ನಂಬದಿದ್ದರೆ ವಿಷ. ' ನಂಬದ ಜನತೆಯ ಸಲುವಾಗಿ ಹೇಳುತ್ತ ಹೀಗೆ ಹೇಳುತ್ತಾರೆ. " ನಂಬರು ನೆಚ್ಚರು ಬರಿದೆ ಕರೆವರು, ನಂಬಿದೊಡೇ ಎನ್ನನೆ ಶಿವನು. " ಅದಕ್ಕಾಗಿ " ಮನ್ಮನಾಭವ ಮದ್ಭಕ್ತೊ... ... ...." 'ನೆರೆ ನಂಬೋ ನೆರೆನಂಬೋ ದುರದುರವಿಲ್ಲದೆ ಸಾಮವೇದಿಗಳಂತೆ ನೆರೆನಂಬೋ ನೆರೆನಂಬೋ ದಾಸದುಗ್ಗಳಿಯಂತೆ. ನಂಬಿದೆಯಾದರೆ ತನ್ನನೀವ ಕೂಡಲ ಸಂಗಮದೇವ.' ನನ್ನಲ್ಲಿ ಭಕ್ತಿಯಿಲ್ಲ. ನಾನು ಅಪರಾಧಿಯೆಂದು ಹುದುಗಬೇಡಿರಿ. ಭೃತ್ಯಾಪರಾಧಿ ಸ್ವಾಮಿನೋದ್ದಂಡನಿದ್ದಾನೆ. " ನ ಮೇ ಭಕ್ತಃ ಪ್ರಣಶ್ಯತಿ " 'ಆರಾದಡಾಗಲಿ ಶ್ರೀಮಹಾದೇವಂಗೆ ಶರಣೆನ್ನಿ. ಏನೂ ಅರಿಯೆನೆಂದು ಮೌನಗೊಂಡಿರಬೇಡ." "ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ " ಕೂಡಲಸಂಗಮ ಕಾಣಿಯ ಸೋಲ.

(೪) ಬಸವಣ್ಣನವರ ಭಕ್ತಿಸೂತ್ರಗಳು ಬರಿಯ ಆತ್ಮಿಕಉದ್ಧಾರಕ್ಕಷ್ಟೇ ನಿಲ್ಲಲಿಲ್ಲ. ವೈಯುಕ್ತಿಕ ಉದ್ಧಾರವಂತೂ ಸರಿಯೇ! ಅವರ ವ್ಯಾವಹಾರಿಕ ತತ್ವಜ್ಞಾನಕ್ಕಾಗಿ ಭಕ್ತರಲ್ಲಿಯ ಪರಸ್ಪರ ವರ್ತನೆಯ ವಿಷಯವಾಗಿಯೂ ಅವರು ಹೇಳಬೇಕಾಯಿತು. ಜಂಗಮವೇ ಲಿಂಗವೆಂದು ಬಗೆದ ಬಸವಣ್ಣನವರು

ಶರಣರಿಗೆ ವಿಶೇಷವಾದ ಸ್ಥಾನವನ್ನು ಕೊಟ್ಟಿದ್ದಾರೆ. ಜಂಗಮರು ಬರಲು ಭಕ್ತನು ಆಸನತ್ಯಾಗ ಮಾಡುತ್ತ, ಕೊಂಕುತ್ತ, ಕೈಮುಗಿದು ಕಂಗಳು ತುಂಬಿ ನಿರೀಕ್ಷಿಸಿ ಹೊಗಳುವದು ಯುಕ್ತವಾದುದು.

ಬಸವಣ್ಣನವರು ಇದನ್ನು ಬರಿಯ ಬಾಯಿಂದ ಹೇಳದೆ ಕೃತಿಯಲ್ಲಿ ಮಾಡಿಯೂ ತೋರಿಸಿದರು. ಅವರು ಕಾಲವಾದ ೫೦-೬೦ ವರುಷಗಳಲ್ಲಿಯೇ ಅವರ ಜೀವನಚರಿತ್ರೆಯನ್ನು ಬರೆದ ಹರಿಹರನು ಈ ವಿಷಯವನ್ನು ಸುಂದರ ವಾಗಿ ಎತ್ತಿ ತೋರಿಸಿದ್ದಾನೆ (ಸ್ಥಲ ೭, ಪು. ೪೧).

"ಅಮುವು ಭಕ್ತ್ಯೈಕ ನಿಧಿ ಬಸವಂ ಮನಂಗೊಂಡು,
ಶರಣರ ಪದಂಗಳಂ ಹರುಷದಿಂ ತೊಳೆವುತಂ,
ಕರಮೊಸೆದು ಪಾದೋದಕಂಗಳಂ ತೊಳೆವುತಂ,
ಬಮುಕಿದೆ ನುತ್ತವರ್ಚನೆಗೆಡೆ ಮಾಡುತಂ.. ....
........ತಪ್ಪದೆಲ್ಲರ್ಗೆ ತರತರದಿಂದ ವೈಯಿಕ್ಕಿ
ಪಲ್ಲಿರಿದು ತಗ್ಗಿ ತಲೆಗರೆದು ಬೆರಳಂ ಕಚ್ಚಿ
ಕಾಲ್ಗೆರಗಿ ಕುಗ್ಗಿ ಕಿಂಕರತೆಯಿಂ ನೆಲೆಪಚ್ಚಿ ..."

ಈ ಚಿತ್ರವು ಬಸವಣ್ಣನವರು ವಚನಗಳಲ್ಲಿ ಹೇಳುವ ಮಾತುಗಳಿಂದ ಏನೂ ಭಿನ್ನವಾಗಿಲ್ಲ. (ನೋ. ಸ್ಥ. ೯, ಪು. ೫೮ ಇ.)

"ನಾನೆಂದೂ ಮಂಚವನೇರದ ಭಾಷೆ" ಇವೆಲ್ಲವೂ ಅವರ ಜೀವನದಲ್ಲಿ ನಡೆದ ಅಂಶಗಳೇ ಆಗಿವೆ. "ಜಂಗಮ ಸನ್ನಿಧಿಯಲ್ಲಿ ವಾಹನವೇರಲಮ್ಮೆ" (ಪು. ೫೯) ಎಂದು ಅವರು ಭಾಷೆ ಹೊತ್ತುದು ಹರಳಯ್ಯ ಮಧುವಯ್ಯಗಳ ಪ್ರಸಂಗದ ಕಾಲದಲ್ಲೇ ಎಂದು ಕಾಣುತ್ತದೆ.

ಅವರ ಭಕ್ತಿಮಾರ್ಗದಲ್ಲಿ ಅಂತರಬಾಹ್ಯ ಪರೀಕ್ಷೆಯಿಲ್ಲ. ಅವರು ಶೈವ ರೆಂದು ಹೇಳಿಕೊಂಡರೆ ಸಾಕು. ಬಸವಣ್ಣನವರಿಗೆ ಅವರಲ್ಲಿ ತುಂಬಾ ವಿಶ್ವಾಸ. ಹರಿಹರನು ಹೇಳುವ ಬದನೆಕಾಯಿ ಲಿಂಗವಾದ ಸಂದರ್ಭವು ಸಂಭವಿಸಿ ದಾಗಲೇ (ಸ್ಥಲ ೯, ಪು. ೫೯) ಬಸವಣ್ಣನವರು,

"ಲಾಂಛನವ ಕಂಡು ನಂಬುವೆ ಅವರಂತರಂಗವ ನೀವೇ ಬಲ್ಲಿರಿ. ತೊತ್ತಿಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎಮಗೇಕಯ್ಯ" ಎಂದು ಹೇಳಿರಬಹುದು. ( ನನ್ನ ಮಟ್ಟಿಗೆ ವಚನಗಳಿಗೆ ಸಂವಾದಿಯಾಗುವಂತೆ

ಹರಿಹರನು ತನ್ನ ಕಾವ್ಯದಲ್ಲಿ ಪ್ರಸಂಗಗಳನ್ನು ನಿರ್ಮಿಸಿಕೊಂಡಿದ್ದಾನೆನ್ನುವದಕ್ಕಿಂತ ಆ ಆ ಸಂದರ್ಭದಲ್ಲಿ ಬಸವಣ್ಣನವರು ಹಾಗೆ ಅಂದಿದ್ದಾರೆಂದು ಹೇಳುವದೇ ಸರಿಯೆನಿಸುತ್ತದೆ.)

ಅಲ್ಲಮಪ್ರಭುವ ಜ್ಞಾನೋಪದೇಶವಾದ ಮೇಲೆಯೇ 'ಬೇರೂರಲಿದ್ದು ಬಂದ ಜಂಗಮವೇ ಲಿಂಗವೆಂದು ಕಂಡ' ಎಂಬ ವಚನವನ್ನು ಕೇಳಿರಬಹುದು. "ಉಟ್ಟು ತೊಟ್ಟ ಜಂಗಮ, ಕಂತೆಗೊಂತಿಯ ಜಂಗಮ,ಎಂಬ ಭೇದವನ್ನು ಮಾಡುವದೇ? ಹಡೆದುಂಬ ಸೂಳೆಯಂತೆ ಧನವುಳ್ಳವರನರಸುವರೇ?" ಎಂಬ ವಚನಗಳು ಪ್ರಭುಲಿಂಗಲೀಲೆಯ ಇಷ್ಟಲಿಂಗೋಪದೇಶ ಸಂಧಿಯ ಪದ್ಯಗಳಿಗೆ ಸಂವಾದಿಯಾಗಿವೆ. (ಬಸವಣ್ಣನವರಾದರೂ ಅಲ್ಲಿ ತಮ್ಮ ಕ್ಷಮೆಯನ್ನು ಕೇಳಿಕೊಳ್ಳುತ್ತಾರೆ.)

ನಾನು ಮರವೆಯ ಮರುಳು ಸಂತತ
ನೀನು ಅರಿವಿನ ತಿರುಳು ತಿಳಿವಡೆ
ನಾನು ರಂಜಕನಖಿಳರರಿಯಲು ನೀ ನಿರಂಜನನು!
ನಾನು ಭಾವಿಸೆ ಪಶು ವಿಚಾರಿಸೆ
ನೀನು ಪಶುಪತಿ ಎನ್ನ ತಪ್ಪನು
ನೀನೆ ತಿದ್ದುವದೆನುತ ಮೈಯಿಕ್ಕಿದನು ಬಸವೇಶ ||

( ಪ ೩೨೫ )

ಇಂಥವರಲ್ಲಿ ಚೌಕಾಸಿ ಮಾಡಿದರೆ ನಾಯಕ ನರಕ. "ಭಕ್ತರಲ್ಲಿ ಕುಲವನರಸುವರೆ? ಒಡಲಕಳವಳಕ್ಕೆ ಬಾಯಸವಿಗೆ ಬಯಸಿ ಉಂಡೆನಾದರೆ ನಿಮ್ಮ ತೊತ್ತಿನ ಮಗನಲ್ಲ. ಬಿಡೆ ಬಿಡೆ. ನಿಮ್ಮ ಸದ್ಭಕ್ತರ" ವಾರುಧಿ ಮೈ ತೆಗೆದರೆ ರತ್ನಗಳನ್ನು ಕಾಣುವಂತೆ ಶರಣರು ಮನತೆರೆದರೆ ಲಿಂಗವನ್ನು ಕಾಣಬಹುದು. ಅಂತಹ ಸ್ವಭಾವ ಶರಣರದು. "ಶರಣನಿದ್ದೆಗೈಯ್ದೊಡೆ ಜಪಕಾಣಿರೋ; ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ; ಅವನು ನುಡಿದುದೇ ಶಿವತತ್ವ ಅವನ ಕಾಯವೇ ಕೈಲಾಸ."

(೫) ಸಕೃದ್ದರ್ಶನಕ್ಕೆ ಭಕ್ತಿಯು ಸುಲಭವಾಗಿ ಕಂಡರೂ ಅದು ಬಾಳ ಬಾಯಧಾರೆ. ಲಿಂಗ ಮೆಚ್ಚಬೇಕು. ಜಂಗಮ ಮೆಚ್ಚಬೇಕು. ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು. ಅಲ್ಲದೆ ಈಶ್ವರನ ಅರೆ

ತಕ್ಕೆ ನಿಂತು ಗಂಧವಾಗಬೇಕು. ಬಂಗಾರವಾಗಬೇಕು. ಇತಿಹಾಸವಾದರೂ ಅದನ್ನೇ ಹೇಳುತ್ತದೆ. ಈಶ್ವರನು ದಾಸನ ವಸ್ತ್ರವನ್ನು ಹರಿಯಲಿಲ್ಲವೇ ? ಚನ್ನಯ್ಯನ ಸಂಗಟ ಉಣಲಿಲ್ಲವೆ ? ಸಿಂಧುಬಲ್ಲಾಳನ ವಧುವನ್ನು ಕೊಳ್ಳಲಿಲ್ಲವೆ ? ಸಿರಿಯಾಳನ ಮಗನನ್ನು ಬೇಡಲಿಲ್ಲವೆ ? ಇವೆಲ್ಲಕ್ಕೂ ಅವರು ಎದೆಗೊಟ್ಟು ನಿಂತರು. ಬಸವಣ್ಣನವರಾದರೂ ಇಂಥ ಭಕ್ತಿ ಮಾರ್ಗವನ್ನರಿತು ಅದನ್ನು ಅಂಗೀಕರಿಸಿದರು. ಇಂಥ ಹೊಡೆತಕ್ಕೆ ನಿಂತೂ, ಮಳೆ ಬಿಲ್ಲ ಕಾಂತಿಯನ್ನು ಸೂರೆಮಾಡಿದರು. ಹರಿಹರ ಮಹಾ ಕವಿಯು ಬಸವಣ್ಣನವರು ಮಾಯಿ ದೇವಿಯರನ್ನು ಈಶ್ವರನಿಗೆ ಅರ್ಪಿಸಿದ್ದನ್ನು ಮನೋಜ್ಞವಾಗಿ ವರ್ಣಿಸಿದ್ದಾನೆ. ಬಸವಣ್ಣನವರಂತೆ ಮಾಯಿದೇವಿಯಾದರೂ 'ಜಂಗಮಕ್ಕೆ ಬಸವರಾಜಂ ಕೊಟ್ಟನಲ್ಲದೆ. ಮಾಣನೆಂದು ಸಿಂಗರಿಸಿಕೊಂಡು ಬಸವನ ಬರವಂ' ಪ್ರಾರ್ಥಿಸಿದ್ದಳು.

ಬಸವಣ್ಣನವರಾದರೂ ತಮ್ಮ ವಚನಗಳಲ್ಲಿ ಈ ವಿಷಯವನ್ನು ಹೇಳಿದ್ದಾರೆ. " ಏನು ಮಾಡುವೆ ನನ್ನ ಪುಣ್ಯದ ಫಲವು! ಶಾಂತಿಮಾಡಹೋದರೆ ಬೇತಾಳವಾಯ್ತು." ಸುಖಕ್ಕಾಗಿ ಬಯಸಿದ ಈ ಸಾಧನೆಯು ಬಿಡದೆ ತನ್ನ ಮೈಯನ್ನೇ ತಿನ್ನುತ್ತಿದೆ. " ಸುಖಕ್ಕೆ ತುಂಬಿದ ದೀವಿಗೆ. ಮನೆಯೆಲ್ಲವ ಸುಟ್ಟಂತೆ ನಾನು ಮಾಡಿದ ಭಕ್ತಿ ಎನಗೆ ಇಂತಾಯ್ತು."

(೬) ಭಕ್ತನಿಗೆ ಈರಸದಲ್ಲಿ ನಾಚಿಕೆ ಎಂಬುದಿಲ್ಲ. " ಭಕ್ತರತಿಯು ವಿಕಲತೆಯು ಯುಕತಿಯು ಏನ ಬೆಸಗೊಂಬಿರಯ್ಯಾ? ಕಾಮಿಗೆ ಉಂಟೆ ಲಜ್ಜೆ ನಾಚಿಕೆ? ಇದೂ ಅಲ್ಲದೆ ಭಕ್ತರು ಆಣೆ ಮಾಡಲಾಗದೆಂದು ಹೇಳುತ್ತಾರೆ. ಹಾವಿನ ಹೆಡೆಯನ್ನು ಕೊಂಡು ಕೆನ್ನೆಯನ್ನು ತುರಿಸಿಕೊಳ್ಳುವದೆ? ಅಲ್ಲದೆ ಊಟ ಮಾಡುವಾಗಲೂ ಲಿಂಗಾರ್ಪಿತವ ಮಾಡಿದ ಬಳಿಕಲೂ ತುತ್ತಿಗೊಮ್ಮೆ ಶಿವ ಶರಣವೆನ್ನಬೇಕು. ಅಂದರೆ ಕರಣ ವೃತ್ತಿಗಳು ಅಡಗುವವು.

(೭) ಹೀಗಿದ್ದು ಬಸವಣ್ಣನವರ ಭಕ್ತಿಯಲ್ಲಿ ಆಡಂಬರವಿಲ್ಲ. ಅವರು " ಅವರು ಬಚ್ಚ ಬರಿಯ ಬಸವ. " ಅವರ ಭಕ್ತಿಯು ಕನ್ನೆಯ ನಿಲುವಿನ ಸ್ನೇಹದಂತೆ ಅಂತರ್ಗಾಮಿಯಾದುದು. ನೆನೆಯೊಳಗಣ ಕಂಪಿನಂತೆ ಮಧುರವಾದುದು. ಅಲ್ಲಿ ಬಣ್ಣನೆಯ ಮಾತುಗಳಿಗೂ ಅನವಶ್ಯಕ. ಆವೇಶಕ್ಕೂ ಎಡೆಯಿಲ್ಲ. ರಚ್ಚೆ ನೆರವಿಗೆ ಸಾಣಿ ನುಡಿ ಇಲ್ಲದಿಹುದೇ? ಅದರಂತೆನಬಹುದೇ ಸಜ್ಜನ ಪ್ರೀಯು? ಭಕ್ತರತಿಯು ಕರುಳಕಲೆ ಪ್ರಕಟಿತ ಉಂಟೆ?

೮. ಬಸವಣ್ಣನವರ ಪ್ರಕಾರ ಇಂಥ ಭಕ್ತಿಗೆ ಈಶ್ವರನೇ ಆರಾಧ್ಯದೇವತೆ. ವಿಷ್ಣು ಬ್ರಹ್ಮರಲ್ಲ. "ಮುನ್ನೂರರವತ್ತು ನಕ್ಷತ್ರಕ್ಕೆ ಬಾಯ್ಬಿಟ್ಟುಕೊಂಡಿರುವದೇ ಸಿಂಪು? ಅದು ಸ್ವಾತಿಗಲ್ಲದೆ ಬಾಯ್ದೆರೆಯದು." ಬ್ರಹ್ಮನೇ ಹುಟ್ಟಿಸುವವನಾಗಿದ್ದರೆ ತನ್ನ ಶಿರವನ್ನೇಕೆ ಹುಟ್ಟಿಸಲಾರನು? ವಿಷ್ಣುವೇ ರಕ್ಷಕನಾಗಿದ್ದರೆ ತನ್ನ ಮಗನನ್ನೇಕೆ ರಕ್ಷಿಸಲಾರನು? ಅಮೃತವನ್ನು ಕಡೆಯುವಲ್ಲಿ, ವಿಷವು ಅಟ್ಟಿ ಸುಡುವಲ್ಲಿ, ದೇವರೆಂಬವರು ಎತ್ತ ಹೋದರು? ಹೀಗಿರಲು ಅನ್ಯ ದೈವಕ್ಕೆರಗುವದು "ಹುಳ್ಳ ಕುಟ್ಟಿ ಕೈ ಹೊಟ್ಟೆಯಾದಂತೆ." ಅಂಜಿಕೆ ಬಂದರೆ ಹೊಳುವ ದೈವಗಳು, ಸಾಲಬಟ್ಟರೆ ಮಾರಿ ಉಣ್ಣುವ ದೈವಗಳು, ತಿನ್ನುವ ಮಾರಿಕವ್ವೆ, ಉಣಲುಡಲು ಪಡೆದು ಕಾಯಲಿಲ್ಲದೆ ಕೊಲಲೆತ್ತಿದ ಮಾರಿ, ಮಡಕೆ, ಬೀದಿಯ ಕಲ್ಲು, ಈ ಎಲ್ಲ "ಬಿಕ್ಕನೆ ಬಿರಿವ ದೈವಗಳು ದೈವಗಳೇ?" ಹೀಗೆ ದೈವವೆಂಬಲ್ಲಿ ಕಾಲಿಡಲು ತೆರಪಿಲ್ಲ. ಆದ್ದರಿಂದ ಈಶ್ವರನನ್ನು ನಂಬುವದೇ ಯೋಗ್ಯ. ನಾಯಿಯನ್ನು ಹಿಡಿತಂದು ಸಾಕಿದರೆ ತನ್ನೊಡೆಯನಿಗೆ ಬೊಗಳುವ ಹಾಗೆ ಮಾಡಬಾರದು. ನಂಬಬಲ್ಲ ಭಕ್ತನಿಗೆ ದೇವನೊಬ್ಬನೇ. ಕಂಡ ದೈವಕ್ಕೆ ಕಣ್ಣು ಚಲ್ಲುವದು ಬೆಲೆವೆಣ್ಣಿನ ರೀತಿ.

ಜ್ಞಾನಪೂರಿತವಾದ ಈ ಈಶ್ವರಪಾರಮ್ಯವು ಯುಕ್ತಿಯುಕ್ತವೂ ಶಕ್ತಿಯುತವೂ ಏಕಮೇವ ಮಾರ್ಗಪ್ರಚೋದಿತವೂ ಆಗಿದ್ದರೂ ಕೂಡ, ಎಷ್ಟೋ ಸಲ ಬಸವಣ್ಣನವರ ಈ ನಿಷ್ಠೆಯು ಅಭಿಮಾನವಾಗಿ, ಅಭಿಮಾನವು ಹಟವಾಗಿ, ಹಟವು ವಿಪರೀತವಾಗಿ ಪರಿಣಮಿಸಿದ್ದುಂಟು. ಪಾರಮ್ಯಸ್ಥಾಪನೆಯಲ್ಲಿಯೂ ಹೃದಯವೈಶಾಲ್ಯಕ್ಕೆ ಎಡೆ ಇದೆ. ಆದರೆ ಇಲ್ಲಿ ಮಾತ್ರ ಬಸವಣ್ಣನವರಿಗೆ ಅಲ್ಲಲ್ಲಿ ಎಡಹುಗುಳಿಗಳು ಇವೆ ಎಂದು ವಿಷಾದದಿಂದ ಹೇಳಬೇಕಾಗುತ್ತದೆ. ಈ ಹತ್ತುಹದಿನೈದು ಪುಟಗಳ ವಸ್ತುವಿನಲ್ಲಿ ಕ್ರಮವಿದ್ದರೂ ಕಸವು ಹೆಚ್ಚಾಗಿದೆ; ಜ್ಞಾನವಿದ್ದರೂ ರೋಷವು ಹವಣು ತಪ್ಪಿದೆ. ಕಟುಕಿ ಮತ್ತು ಕಹಿ ನಾಲಿಗೆಗಳ, ಮೃದುತ್ವ ಮತ್ತು ಅತಿರೇಕಗಳ ಜೋಕಾಲಿಯು ಡೋಲು ಹೊಡೆಯುತ್ತದೆ. ಉದಾಹರಣೆಗಾಗಿ "ನೀನಲ್ಲದನ್ಯದೈವ ಉಂಟೆಂಬವನ ಬಾಯ್‌ಕೆನ್ನೆವಾರೆ ಸೀಳಿದಲ್ಲದೆ, ಎನ್ನ ಮುನಿಸು ಹೋಗದಯ್ಯ, ಎನ್ನ ಕೋಪವಡಗದಯ್ಯಾ" ಎನ್ನುವಲ್ಲಿ ಬಂಗಾರದಲ್ಲಿಯ ಮಣ್ಣು ಕಸಗಳು ಇನ್ನೂ ಹಾಗೇ ಉಳಿದಿವೆ. ಬಸವಣ್ಣನವರ ವಚನಗಳ ವಜ್ರದ ವಿಗ್ರಹದೊಡನೆ ಈ ನಾಲ್ಕಾರು ತವರಿನ ಬಡಪಾಯಿಗಳು ಬರಬಾರದಾಗಿತ್ತು.

೯. ಬಸವಣ್ಣನವರ ಭಕ್ತಿಮಾರ್ಗದಲ್ಲಿ ಅಜ್ಞಾನಕ್ಕಾಗಲೀ, ಹಿಂಸೆಗಾಗಲೀ ಎಡೆಯಿಲ್ಲ. "ಬಿಕ್ಕನೇ ಬಿರಿವ ದೈವಗಳನ್ನು' ಅವರು ಹಳಿದಂತೆಯೇ ಅವುಗಳಿಗಾಗಿ ತೆರುವ ಬಲಿ ನೈವೇದ್ಯಗಳನ್ನು ಹಳಿದಿದ್ದಾರೆ. ಈ ವಿಷಯುವನ್ನು ಹೇಳುವಲ್ಲಿ ಬಸವಣ್ಣನವರ ಚಮ್ಮಟಿಗೆ ಹಾಡಿ ಎರಗುತ್ತದೆ.

"ಮಾಶಿನ ಮಾಶಿಂಗೆ ನಿನ್ನ ಕೊಂದಾರೆಂದು ಎಲೆ ಹೋತೆ ಅಳು ಕಂಡೆಯಾ. ಹೋತೆ ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ. ನೀನತ್ತುದಕ್ಕೆ ತಕ್ಕುದು ಮಾಡುವ ಕೂಡಲಸಂಗಮದೇವ."

ಇಲ್ಲಿಯು ಮಾನವ್ಯ, ಕಟಕಿ, ಕಾವ್ಯ, ಅಂತಃಕರಣಗಳು ಮನನೀಯುವಾಗಿವೆ. ಅದಕ್ಕಾಗಿ ಬರಿಯು ಕರ್ಮಠರಾಗದೆ ಸತ್ಯವನ್ನರಿಯುಬೇಕು. ಕೈಯಲ್ಲಿ ಕಟ್ಟಿದ ದರ್ಭದ ಹುಲ್ಲು ಮೊರೆಯಿಡುವಂತೆ ನೀರದಡದಲ್ಲಿ ಕುಳಿತು ಮಣ ಮಣ ನುಡಿದರೆ ಪ್ರಯೋಜನವಿಲ್ಲ.

"ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರು ಕಿಚ್ಚಿದ್ದು ಸುಡುವಾಗ ಬಚ್ಚಲ ನೀರು ಸುರಿಯುವರು." ಇದು ಅವರ ಪೂಜೆಯು ರೀತಿ. ಇಂತಹ ಜ್ಞಾನಶೂನ್ಯವಾದ ಆಚಾರದ ರೀತಿಗೆ ಬಸವಣ್ಣನವರಲ್ಲಿ ಪುರಸ್ಕಾರವಿಲ್ಲ.

೧೦. ಈ ಭಕ್ತಿಮಾರ್ಗದಲ್ಲಿ ಜಾತಿಭೇದವೂ ಇಲ್ಲ. ಲಿಂಗಭೇದವೂ ಇಲ್ಲ. ವ್ಯಾಸ ಬೋಯಿತಿಯು ಮಗ, ಹಾಗೇ ಅರುಂಧತಿ ಮಾರ್ಕಂಡೇಯು ಇತ್ಯಾದಿ. ಹೀಗಿರಲು ನಾವು ಕರೆಯುವ ಜಾತಿವರ್ಣಗಳು ಬರಿಯು ಕಾಯುಕ ಮೂಲಕ ಕಲ್ಪಿತವಾದದ್ದು; "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ" ಇಲ್ಲಿ ಹೀನ ತಾರತಮ್ಯಕ್ಕೆ ಎಡೆಯಿಲ್ಲ. ಅಂದಮೇಲೆ ಕಾಸಿ ಕಮ್ಮಾರನೂ, ಬೀಸಿ ಮಡಿವಾಳನೂ, ವೇದವನೋದಿ ಹಾರವನೂ ಆಗಿರಲು ಯಾರೇನು ಕರ್ಣದಲ್ಲಿ ಜನಿಸಿರುವರೆ? ಆದ್ದರಿಂದ "ಯತ್ರ ಜೀವಸ್ತತ್ರ ಶಿವಃ" ಸಂಗಮದೇವ ಸರ್ವ ಜೀವದಯಾಪಾಲ.

"ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ ಜಲವೊಂದೇ ಶೌಚ ಆಚಮನಕ್ಕೆ ಕುಲವೊಂದೇ ತನ್ನ ತಾನರಿದರೆ" ಇದು ಬಸವಣ್ಣನವರ ಸಂದೇಶ. ಅದಕ್ಕಾಗಿ ತನ್ನ ತಾನರಿಯುಬೇಕು. ಆ ಅರಿವೇ ಗುರುವು. ಆ ಆತ್ಮವಿತ್ತ ಬೆಳಕೇ ಸಮ್ಯಗ್ ಜ್ಞಾನ. ಉಳಿದ ವೇದಾಗಮಗಳೆಲ್ಲ ರಂಜಕದ ಕಥೆ. ಅದಕ್ಕಾಗಿ ಆ ಬೆಳಕನ್ನು ಕಾಣಬೇಕು. ಗಳಿಗೆಯು ಬಾಳಿಗಾಗಿ ಯುಗಯುಗದ

ತರ್ಕದ ಜೋಡಣೆಯು ಅವಶ್ಯಕತೆಯಿಲ್ಲ. ಈ ಆತ್ಮಜ್ಞಾನವೇ ಸ್ವರ್ಗ ಸೋಪಾನದ ಬುತ್ತಿ.

ಈ ರೀತಿಯಾಗಿ ತಮ್ಮ ಆತ್ಮದ ಸ್ಥಾನವನನ್ನರಿತುಕೊಂಡು ತಮಗಾಗಿ ನಿರ್ದಿಷ್ಟವಾದ ಒಂದು ಭಕ್ತಿಕ್ರಮವನ್ನು ಕಣ್ಣೆದುರಿಗಿಟ್ಟುಕೊಂಡು, ಬಸವಣ್ಣನವರು ಸಾಗಿದರು. ಅಂತಲೇ ಕಲ್ಯಾಣವು ಮಂಗಳಪುರವಾಯಿತು. ಲಕ್ಷ ದಶಲಕ್ಷಗಣಗಳು "ಅರ್ಚನೆಗರಳಲಿರ್ದ ಪರಿಮಳದ ಮೊಗ್ಗೆಯಂತೆ" "ರುದ್ರ ಲೋಕದ ರಾಜಪುತ್ರರಂತೆ" ಕಲ್ಯಾಣದಲ್ಲಿ ಬಂದು ಸೇರಿದರು ( ಹರಿಹರ ಸ್ಥ ಲ. ಪು. ೫೭ ) ಸ್ವತಃ ಬಸವಣ್ಣವರು ಈ ಮಾನದಂಡಕ್ಕೆ ಸರಿಹೋಗುವಂತೆ ತಮ್ಮ ಜೀವನವನ್ನು ಉದಾತ್ತ ಗೈಯುತ್ತ ನಡೆದರು. ಆದರೂ ಬಸವಣ್ಣನವರು ಆಧ್ಯಾತ್ಮಿಕ ಜೀವನದಲ್ಲಿ ಆತ್ಮಿಕ ಎಡರುಗಳನ್ನು ಎಷ್ಟು ಸಹಿಸಬೇಕಾಯಿತೋ, ಅಷ್ಟೇ ಬಾಹ್ಯ ಎಡರುಗಳನ್ನೂ ಸಹಿಸಬೇಕಾಯಿತು.

" ಧರ್ಮಸಂತಾನದ ಭಾಂಡಾರಿ ಬಸವ" ನೆಂದುಕೊಳ್ಳುವವನು, ಆಧ್ಯಾತ್ಮವೇ ನಿಜಿತ ಪ್ರಯೋಜನವಾದವನು, ಬಿಜ್ಜಳನ ಭಾಂಡಾರಿಯೇಕೆ? " ಬಿಜ್ಜಳನ ಊಳಿಗದಲ್ಲೇಕೆ? ಈ ರೀತಿ ಹಣಗಳಿಸುವ ವೃತ್ತಿಯೇಕೆ?" ಇತ್ಯಾದಿ ಪ್ರಶ್ನೆಗಳು ಎದ್ದವು. ತನ್ನವರು ತನ್ನ ಎಷ್ಟೇ ಹೊಗಳಿದರೂ ಯಾವ ಮಹಾಪುರುಷನ ಜೀವನಕ್ಕೂ ಅನಿರ್ಬಂಧವಾದ ಮುಕ್ತದ್ವಾರವು ದೊರೆತಿಲ್ಲ. ಅವನಿಗೆ "ಅವತಾರ" ಪ್ರಾಪ್ತವಾಗುವದು ತನ್ನವರೂ ಹೊರಗಿನವರೂಕೂಡಿ ಒಡ್ಡಿದ ಈ ಎಡರುಗಳನ್ನು ಮೆಟ್ಟಿಗೆದ್ದಾಗ. ಯುಗಪುರುಷರ ಕಾಯವು ಮಣ್ಣುಗೂಡಿ ಪೀಳಿಗೆಯನೆನಹು ಮೆಲಕುಹಾಕುವಾಗ ಅವತಾರ ಕಲ್ಪನೆಯು ನುಸುಳುತ್ತದೆ. ಅಲ್ಲಿಯವರೆಗೆ ಈ ಮಹಾಪುರುಷರೂ ಸಾಮಾನ್ಯರೆ. ಮಿಲ್ಟನ್ ಮಹಾಕವಿಯು ಹೇಳುವಂತೆ "ಸುಗುಣದ ಹಾರವು ದೊರೆಯಬೇಕಾದರೆ ದಣವಿಲ್ಲದ ಓಟ ಓಡಬೇಕಾಗುತ್ತದೆ." ( The immortal garland cannot be obtained without heat and dust - Areopaegetica. ) ಈ ಓಟವನ್ನು ಬಸವಣ್ಣನವರು ಓಡಿದರು. ಅದಕ್ಕಾಗಿ ತನ್ನವರೇ ಎತ್ತಿದ ಸ್ವಾರ್ಥದ ಆಪಾದನೆಗೆ ಬಸವಣ್ಣನವರು ಈ ರೀತಿ ಉತ್ತರವಿತ್ತಿದ್ದಾರೆ.

"ಹೊತ್ತಾರೆ ಎದ್ದು ಕಣ್ಣು ಹೊಸವುತ್ತ ಎನ್ನ ಒಡಲಿಂಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ........

ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು ಕೊಡುವೆನುತ್ತರವನವರಿಗೆ (ಕೊಟ್ಟೇನು ಪ್ರಯೋಜನ?) ಆದರೂ ಹೊಲೆ ಹೊಲೆಯರ ಮನೆಯಹೊಕ್ಕಾದರೆಯೂ, ಸಲೆ ಕೈಕೂಲಿಮಾಡಿಯಾದ ರೆಯೂ ನಿಮ್ಮ ನಿಲುವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆ ನಾದರೆ ತಲೆದಂಡ'' ಇದು ಬಸವಣ್ಣನವರು ಹೊತ್ತ ಭಾಷೆ. ಅವರೆಂದಿಗೂ "ಜೋಳವಾಳಿಯವರಲ್ಲ" ಪುನಃ ಮತ್ತೊಂದು ಸಂದರ್ಭದಲ್ಲಿಯೂ ಕೂಡ ತಮ್ಮ ಆತ್ಮ ಮತ್ತು ಉದ್ದೇಶಗಳನ್ನು ಬಸವಣ್ಣನವರು ತೆರೆದು ತೋರಿಸಿ ದ್ದಾರೆ.

"ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ. ನಿಮ್ಮ ಪುರಾತನರಾಣೆ." ಈ 'ತನ್ನ ವರೇ' ಬಸವಣ್ಣನವರ ವಿರುದ್ಧ ಸಭೆ ಹೂಡಿ ತಮ್ಮ ತೀವ್ರ ಭಿನ್ನಾಭಿಪ್ರಾಯ ಗಳನ್ನು ಸೂಚಿಸಿರಲೂ ಬಹುದು. ಇಲ್ಲವೆ ಎಷ್ಟೋ ಹಿರಿಯರೆಂಬವರು ಬಸವಣ್ಣನವರಿಗೆ ಹೆದರಿಕೆಯನ್ನು ಕೂಡ ಹಾಕಿರಬಹುದು. ಇದಕ್ಕೂ ಬಸವಣ್ಣನವರು ಸಿದ್ಧರಿದ್ದಾರೆ. ಅವರ ಆತ್ಮವು ವಜ್ರಕಠಿಣವಾಗಿದೆ; ಅಜಿಂಕ್ಯ ವಾಗಿದೆ. ಊರ ಮುನಿಸನ್ನು ಕೂಡ ಅವರು ಎದುರಿಸಬಲ್ಲರು.

"ಆರು ಮುನಿದು ಎಮ್ಮನೇನು ಮಾಡುವರು? ಊರು ಮುನಿದು ಎಮ್ಮನೇನು ಮಾಡುವದು? ನಮ್ಮ ಕುನ್ನಿಗೆ ಕೂಸಕೊಡಬೇಡ. (ಇಷ್ಟೇ ತಾನೆ!) ನಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ (ಇದಕ್ಕೂ ಹೆಚ್ಚೇನು ಮಾಡಬಲ್ಲರು?) ಆನೆಯಮೇಲೆ ಹೋಹವನ ಶ್ವಾನ ಕಚ್ಚಬಲ್ಲದೆ?'' ಇದು ಅವರ ಮನೋಧೈರ್ಯ. ಬೇಕಾದವರು ರೊಚ್ಚಿಗೇಳಲಿ, ಬೊಗಳಲಿ, ಕೆಂಡ ಫೂತ್ಕರಿಸಲಿ, ಹೆಡೆ-ನಾಲಿಗೆ ಚಾಚಲಿ, ಆತ್ಮವಿತ್ತ ಬೆಳಕೇ ಅವರ ಜೀವನದ ಬುತ್ತಿ.

"ನ್ಯಾಯನಿಷ್ಠುರಿ; ದಾಕ್ಷಿಣ್ಯಪರನಾನಲ್ಲ;" ಲೋಕವಿರೋಧಿ. ಶರಣ ನಾರಿಗಂಜುವನಲ್ಲ ಕೂಡಲ ಸಂಗನ ರಾಜತೇಜದಲ್ಲಿಪ್ಪನಾಗಿ" ಇದು ಬಸ ವಣ್ಣನವರ ಜೀವನದ ಸೂತ್ರ. (ಈ ಸುಂದರ ಹೃದಯದ ಹುಮ್ಮಸು ಸ್ವಾತಂತ್ರ್ಯ ಮತ್ತು ಸ್ಥೈರ್ಯಗಳನ್ನು ಸಾಮಾನ್ಯರು ಮತೀಯತೆ ಎಂದು ತಿಳಿ ದುಕೊಳ್ಳಲು ಎಡೆಯಾಗಿದ್ದರೆ, ಆದರಲ್ಲೇನೂ ಆಶ್ಚರ್ಯವಿಲ್ಲ.) ಬೊಗಳಲಿ. "ಬಾಳ್ವ ಮನೆಗೊಂದು ಬೊಗುಳ್ವುದು ಬೇಳ್ಕುಮೆದನ್ನಿರೇ.'' ಯಾರ

ಹೆದರಿಕೆಯೂ ಬಸವಣ್ಣನವರನ್ನು ಹಿಮ್ಮೆಟ್ಟಿಸದು. "ಆಯುಷ್ಯ ತೀರಿದಲ್ಲದೆ, ಮರಣವಿಲ್ಲ, ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ, ಅಂಜಲೇಕೋ ಲೋಕ ವಿಗರ್ಹಣೆಗೆ ?"

ಹರಿಹರ ಕವಿಯು ಬಸವಣ್ಣನವರ ಈ ಧೈರ್ಯವನ್ನು (ಸ್ಥ ೬.ಪು.೩೬) ಸುಂದರವಾಗಿ ಚಿತ್ರಿಸಿದ್ದಾನೆ. ಬಿಜ್ಜಳನ ಸಭೆಯಲ್ಲಿ ಒಂದು ದಿನ ಬಸವಣ್ಣ ನವರು ಕೇತಕೀ ಕುಸುಮವನ್ನು ಭೂತೇಶ್ವರನಿಗೆ ಅರ್ಪಿಸುವಾಗ ನಾರಾಯಣ ಭಟ್ಟನು ಕಟಕಿಯನ್ನು ನುಡಿಯಲು ಬಸವಣ್ಣನವರು ಸ್ಪಷ್ಟವಾಗಿ ಹೇಳಿದರು:

"ಎಲೆ ಮರುಳವಿಪ್ರಾ, ಎಲೆ ದ್ವಿಜಾಧಮ, ಎಲೆ ಕರ್ಮದ ಕಡುಜಡನೆ ದೇವಂ ಭಕ್ತರ್ ಕೊಟ್ಟಡೆ ಕೈಕೊಳ್ವಂ" ಎಂದು. ಇದು ಅವರ ಧೈರ್ಯದ ದೃಷ್ಟಾಂತ. ಹಾಗೇ ಕಂಬಳಿಯ ನಾಗಿದೇವನ ಮನೆಯಲ್ಲುಂಡಾಗ, ದರ್ಭೆಯ ನಿರ್ಭಾಗ್ಯರಾದ, ವೃಥೋತ್ಸಾಹಿ ವಾಸುಟ್ಟಿಸಾದಿಗಳು ಬಿಜ್ಜಳನಿಗೆ ದೂರು ಹೇಳಲು ಬಸವಣ್ಣನವರು ಬಿಜ್ಜಳನಿಗೆ ಹೇಳುತ್ತಾರೆ. "ಎಲೆ ಬುದ್ಧಿಯಿಲ್ಲದ ಭೂಪ, ಎರಗಿವಿಯ ಮರು ಮರುಳೆ" ಎಂದು ( ಸ್ಥಲ ೧೦ ಪು ೬೮ ) ಹರಿಹರನು ಇಂಥ ಅನೇಕ ಸನ್ನಿವೇಶಗಳನ್ನು ತಂದಿದ್ದಾನೆ.

ಈ ರೀತಿ ಕೆಲವು ಜನ ಹೆದರಿಸಿದಂತೆಯೇ ಮತ್ತೆ ಕೆಲವರು ಬಸವಣ್ಣ ನವರ ತತ್ವಜ್ಞಾನದಲ್ಲಿ ಬರುವ ಸ್ತ್ರೀ ಪ್ರಾಧಾನ್ಯದ ಮೂಲಕ ಅವರ ಲೈಂಗಿಕ ಪ್ರವೃತ್ತಿಯ ಬಗ್ಗೆಯೂ ಆಪಾದನೆ ಎತ್ತಿರಲೂಬಹುದು. ಇಂದು ಮಹಾತ್ಮಾ ಗಾಂಧಿ ನ್ನೈರ ವಿಷಯ ಕೆಲದಿವಸ ಜನತೆಯನ್ನು ರಂಜಿಸಲಿಲ್ಲವೇ ? ಅದಕ್ಕಾಗಿ ಬಸವಣ್ಣನವರು ಸ್ಪಷ್ಟವಾಗಿ ಹೇಳಿದ್ದಾರೆ:

"ಹರಿವ ಹಾವಿಗಂಜೆ ಉರಿಯ ನಾಲಿಗೆಗಂಜೆ; .... ಒಂದಕಂಜುವೆನು ಒಂದಕಳುಕುವೆನು ....ಪರಸ್ತ್ರೀ ಪರಧನವೆಂಬ ಜೂಬಿಂಗಂಜುವೆನಯ್ಯ." ಅವರಿಗೆ ಪರವಧು ಮಹಾದೇವಿ ( "ಪರವಧುವನು ಮಹಾದೇವಿಯೆಂಬೆ." )

ಇಂತಹ ನಿರ್ಮಲ ಧೈರ್ಯವುಳ್ಳವರಿಗೆ ಬಿಜ್ಜಳನ ಭಾಂಡಾರದ ಹವಣಿಕೆಯೆ ? "ಊರಮುಂದೆ ಹಾಲಹಳ್ಳ ಹರಿಯುತ್ತಿರಲಿ... .......... ಲಜ್ಜೆ ಗೆಡಲೇಕೆ ? ಕೂಡಲಸಂಗಯ್ಯನುಳ್ಳನಕಬಿಜ್ಜಳನ ಭಾಂಡಾರವೆನಗೇಕಯ್ಯ ?" ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಬಸವಣ್ಣನವರು ಹೀಗೆ ಪ್ರತಿ ಭಟಿಸಿದ್ದಲ್ಲದೆ ತಮ್ಮ ಜೀವನಸೂತ್ರಗಳನ್ನು ಕೃತಿಯಲ್ಲಿಯೂ ಮಾರ್ಪಡಿಸಿ ದರು. ಒಬ್ಬ ಪ್ರಸಿದ್ಧ ವಿಮರ್ಶಕರು ಹೇಳುವಂತೆ ಅವರಿಗೆ ಸುಂದರಜೀವನ

ವೆಲ್ಲ ಸುಂದರ ತತ್ವಗಳ ಪರೀಕ್ಷೆಯಾಗಿದ್ದಿತು. ಅಲ್ಲದೆ ನಿರ್ಮಲಿನವಾದ ಜೀವನವೊಂದೇ ಈಶ್ವರನಲ್ಲಿಯು ಅಚಲ ವಿಶ್ವಾಸದ ಸಾಕ್ಷಿಯಾಗಿದ್ದಿತು." (" A good life to him was the test of good faith and a clear life the only proof of faith in God" ) ಅಂತಲೇ ಕಳ್ಳರು ಆಕಳವ ಕೊಂಡೊಯ್ದರೆಂದು ಹುಯ್ಯಲಿಟ್ಟಾಗ (ಹರಿಹರ ಸ್ಥಲ ೯ ಪು ೬೧) ಬಸವಣ್ಣನವರು:

" ತಾಯ್ಗಳುಮ್ಮಳಿಸಲಾಗದು ಕರುಗಳಂ ಬಿಳುರೆ, ಮಕ್ಕಳುಗಳು ಮರಿಗಳು ನೋಯುಲಾಗದು ಬಿಡಿರೆ; ಸಂಗನೇ ಉಂಬುವವಂ ಸಂಗನೇ ಉಡುವವಂ" ಇ ಇ. " ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೊ ಅಲ್ಲಿ ಉಂಬರೆ ಸಂಗ ಇಲ್ಲಿ ಉಂಬರೆ ಸಂಗ" ಎಂದು ಹೇಳಿದರು. ಈ ಚಿತ್ರವು ಶೆರಿಡನ್ ಕವಿಯು ನಾಟಕ ಗೃಹವು ಸುಟ್ಟಾಗಿನ ನೆನಹನ್ನು ತಾರದಿರದು. ಹಾಗೆಯೇ ಕಳ್ಳರು ಬಂದಾಗ ಜಂಗಮ ಬಂದರೆಂದು ನೀಲಾಂಬಿಕೆಯು ಒಡವೆಗಳನ್ನು ಕೊಡಿಸಿದ್ದನ್ನು ನೋಡಬಹುದು. " ಶಿವಭಕ್ತಿಯೆಂದು ನಂಬಿದೆನಲ್ಲ." ಅಂತೂ ಬಸವಣ್ಣನವರ ಆತ್ಮವು ನಿಕಷಕ್ಕೆ ನಿಂತು, ಈ ಪರೀಕ್ಷೆಗೆ ಕಟ್ಟಿ, ಶುದ್ಧ ಚಿನ್ನವಾಯಿತು. ನಿಂದೆ, ಆರೆತ, ಕುಚೋದ್ಯ, ಪ್ರತಿಭಟನೆಗಳ ಹೋಮದಲ್ಲಿ ಬೆಂದು ಅಪಕ್ವವಿದ್ದುದು ಪಕ್ವವಾಯಿತು. ಅಪೂರ್ಣವು ಪೂರ್ಣವಾಯಿತು. ಬಂಧನಗಳನ್ನು ಬೀಳ್ಗಳೆದು ಜೀವನವು ತುಂಬ ಹೊಳೆಯಾಗಿ ಹರಿಯಿತು. ಹೃದಯವು ಸ್ವಚ್ಛಂದ ಛಂದದಲ್ಲಿ ತಾನೇ ತಾನಾಗಿ ಹಾಡಿತು. ಆದರ ಪ್ರತಿ ನುಡಿಯು " ಮುತ್ತಿನ ಹಾರವಾಯಿತು. " " ಮಾಣಿಕ್ಯದ ದೀಪ್ತಿಯಾಯಿತು." ಕಾಯದ ಕಳವಳವು ಸಂಪೂರ್ಣ ನಾಶವಾಗಿ ಆತ್ಮವಕ್ಯಯು ಐಕ್ಯದೆಡೆಗೆ ರಭಸದಿಂದ ಸಾಗಿತು." ಅಲ್ಲಿ ಯದ್ಭವಂ ತದ್ಭವತಿ, ಉರಿಬರಲಿ, ಸಿರಿಬರಲಿ." ಬೇಕು ಬೇಡಿಲ್ಲ. ಈ ರೀತಿಯಾಗಿ ಬಸವಣ್ಣನವರು ಕಾದಿ ಗೆದ್ದರು. ಧರ್ಮ ಸಂತಾನಿಯಾದರು. ಧರ್ಮ ಸಂತಾನವನ್ನು ಬೆಳೆಸಿದರು. ಅವರ ಪರಿಪೂರ್ಣ ಜೀವನದ ಸೊಲ್ಲು ನಕ್ಷತ್ರಗಳ ಸಮುದಾಯ ಸಂಗೀತದಲ್ಲಿ ತನ್ನ ಧ್ವನಿಯನ್ನು ಬೆರೆಸಿತು. ಐಕ್ಯಜೀವನದಲ್ಲಿ ಭಗ್ನ ಮನೋರಥರಾಗಿ, ಬಾಹ್ಯ ಶಕ್ತಿ ಉಡಿಗಿ, ಹಿಂಸೆಗೆ ಹೇಸಿ, ಕಣ್ಣೀರ್ದುಂಬಿ ಜೀವನರಂಗದಿಂದ ತತ್ತರಿಸುತ್ತ ಬಸವಣ್ಣನವರು ಕೆಳಗಿಳಿದರೂ,ಅವರ ಆತ್ಮವು ಕಪ್ಪಡಿಯ ಸಂಗಮನ ಚಿತ್ಪ್ರಭೆಯಲ್ಲಿ ಐಕ್ಯ ಹೊಂದಿತು. ಮರಣದಲ್ಲೇ

ಮಹಾನವಮಿಯನ್ನು ಕಂಡಿತು. ಕರುಳು ಕುಪ್ಪಳಿಸಿ ಅಟ್ಟಿ ನೆಲಕ್ಕೆಬಿದ್ದಿದ್ದರೂ ನಾಲಿಗೆಯು 'ಕೂಡಲ ಸಂಗಮ' ವೆನ್ನುತ್ತಿದ್ದಿತು. ಇಂತಹ ಚರಮಸ್ಥಿತಿಯಲ್ಲಿ ಮಾನವ್ಯತೆ ಬಯಸಬೇಕಾದುದೇನು? ತೆತ್ತೀಸಾದಿ ದೇವತೆಗಳು ಉಘೆ ಉಘೆ ಎನ್ನುವಲ್ಲಿ ಐಕ್ಯ ಪಡೆದ ಬಸವಣ್ಣನವರಿಗೆ ಹೃದಯಾಂತರಾಳಪೀಠದಲ್ಲಿ ತೆರಪುದೊರೆಯಿತು. ಕಂಗಳು ತುಂಬಿದ ಬಳಿಕ ಬಸವಣ್ಣನವರು ನೋಡಲಿಲ್ಲ. ಕಿವಿ ತುಂಬಿದ ಬಳಿಕ ಕೇಳಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ.

---

# ರಾಮಾಶ್ವಮೇಧದ ಹೊಸ ದೃಷ್ಟಿ



ಕನ್ನಡ ಸಾಹಿತ್ಯದಲ್ಲಿ ನವೀನ ಮಾರ್ಗಪ್ರವರ್ತಕರಾದ ಕವಿಗಳಲ್ಲಿ ಮುದ್ದಣನೂ ಒಬ್ಬ. ನಯಸೇನ, ಹರಿಹರ, ಸರ್ವಜ್ಞ, ಮುದ್ದಣ—ಈ ಎಲ್ಲರೂ ಕಾಲಕಾಲಕ್ಕೆ ಕನ್ನಡ ಪ್ರವಾಹಕ್ಕೆ ಹೊಸ ಹೊಸ ಮಾರ್ಗಗಳನ್ನು ಹಾಕಿಕೊಡುತ್ತ ಬಂದಿದ್ದಾರೆ. ತಮ್ಮ ಕಾವ್ಯೋದ್ದೇಶ ಮತ್ತು ಪ್ರಯತ್ನಗಳಿಂದ ಕಾಲಕಾಲಕ್ಕೆ ಹೊಸ ದೃಷ್ಟಿಯನ್ನು ಕೊಟ್ಟಿದ್ದಾರೆ. ಮುದ್ದಣಕವಿಯ ವ್ಯಕ್ತಿತ್ವವು ಅದ್ಭುತರಮ್ಯವಾದಷ್ಟೇ, ರಾಮಾಶ್ವಮೇಧ ಕಾವ್ಯವು ಹೊಸ ದೃಷ್ಟಿಯುಳ್ಳುದೂ ಚಿರಸ್ಥಾಯಿಯೂ ಆಗಿದೆ. ಪ್ರಯೋಗ ಮತ್ತು ಸಿದ್ಧಿಗಳ ಅನುಪಮ ಹೊಂದಿಕೆಯನ್ನು ನಾವು ಈ ಕಾವ್ಯದಲ್ಲಿ ಕಾಣಬಹುದು.

ಮುದ್ದಣ ಕವಿಯು ಜೀವನದಲ್ಲಿ ಎಷ್ಟೇ ವಿನಮ್ರನಾಗಿರಲಿ, ಸಾಹಿತ್ಯದಲ್ಲಿ ಮಾತ್ರ ಎಷ್ಟೋ ಕ್ರಾಂತಿಕಾರಿಯಾಗಿದ್ದಾನೆ. ಹಳೆ ಹೊಸದರ ಸೇತುವೆಯಾದ ಇವನ ಕಾವ್ಯವು ಹೊಸದರ ಬೆಳಗನ್ನೇ ಸೂಚಿಸುತ್ತದೆ. ಗತಾನುಗತಿಕವಾಗಿ ಬಂದ ಚಂಪೂಕಾವ್ಯದ ರೀತಿಯಾಗಲೀ, ತಲೆಭಾರವಾದ ಕಾವ್ಯದ ಧರ್ಮೋದ್ದೇಶವಾಗಲೀ, ಕಾವ್ಯಪ್ರಾರಂಭದ ಅನವಶ್ಯಕ ಕುಸ್ತಿಯ " ಹೈಪಾ" ಆಗಲೀ, ಸಂಸ್ಕೃತದ ಅತಿಯಾದ ಪೌರೋಹಿತ್ಯವಾಗಲೀ, ಅವನಿಗೆ ಅಷ್ಟು ಹಿಡಿಯದು. ಅಂತಲೇ ಮನೋರಮೆಯ ಸಂವಾದದ ಮೂಲಕವಾಗಿ ತನ್ನ ಸುನಿಶ್ಚಿತವಾದ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳಿದ್ದಾನೆ.

ಅಂತಲೇ ಮುದ್ದಣನಲ್ಲಿ ಗದ್ಯವು ತನಗೆ ಸಲ್ಲಬೇಕಾದ ಸರಿಯಾದ ಮರ್ಯಾದೆಯನ್ನು ಪಡೆಯಿತು. " ಗದ್ಯಂ ಸಮಸ್ತ ಜನತಾಹೃದ್ಯಂ...." ಎಂದು ನೃಪತುಂಗನಿಂದ ಪ್ರಾರಂಭವಾಗಿ ಪದ್ಯಕ್ಕೇ ಬಹುಮಟ್ಟಿಗೆ ರಾಜಕಿರೀಟ. ವೊಡ್ಡಾರಾಧನ ವಚನಗಳ ಕಾಲ ಉಸುಬಿನಲ್ಲಿ ಹಸಿರು ನಡುಗಡ್ಡೆಗಳಿದ್ದ ಹಾಗೆ. ಚಂಪುವಿನ ಶ್ರೀಮದ್ಗಾಂಭೀರ್ಯದಲ್ಲಿ ತಲೆಬಾಗಿ ನಿಂತ ಗದ್ಯವು ಪ್ರೌಢ ಆಚಾರ್ಯರ " ಸಂಸ್ಕೃತ" ಮನೆಯ ಬಾಗಿಲ ಬಳಿ ಲೌಕಿಕ ನಿಂತ

"ಖ್ಯಾತವೃತ್ತ"ಗಳ ಹೊಸ್ತಿಲವನ್ನು ದಾಟಿಯೋ ಅದಕ್ಕೆ ಅನ್ನ ನೀರು. ಅದರ ಮುಖ ಶ್ರೀಮಂತರ ಮನೆಯ ಮದುವೆಯ ಸಂರಂಭದಲ್ಲಿ ಬಡ ಜ್ಞಾತಿಯದಿದ್ದ ಹಾಗೆ. ಇತರ ಕಡೆಗೆ ತತ್ವಪಾರಿಭಾಷದ ಕೂಲಿಹೊರುವ ಭಾರ ಮಾತ್ರ ಅದರದು. ಅಂತಲೇ ಮುದ್ದಣನಲ್ಲಿ ಇದರ ಸ್ಪಷ್ಟ ಪ್ರತಿಭಟನೆ ಕಂಡುಬರುತ್ತದೆ:

"ಆವ ದಾಟಿಯೊಳ್ ಪೇಳ್ವೆಂ?...ಪದ್ಯದೊಳ್ ಪೇಳ್ವೆನೊ?
ಗದ್ಯದೊಳ್ ಪೇಳ್ವೆನೊ?"

ಇದಕ್ಕೆ ಮನೋರಮೆಯ ಸ್ಪಷ್ಟ ಉತ್ತರ ಕೇಳಿ:

"ಪದ್ಯಂ ವಧ್ಯಂ; ಗದ್ಯಂ ಹೃದ್ಯಂ; ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು"

ಪದ್ಯವು ವಧ್ಯವಿರಲಿ ಬಿಡಲಿ, ಗದ್ಯ ಮಾತ್ರ ನಿಸ್ಸಂದೇಹವಾಗಿ "ಹೃದ್ಯ" ವಾಯಿತು. ಲಲಿತಸಾಹಿತ್ಯದ ವಾಹಕದ ಮರ್ಯಾದೆಯನ್ನು ಪಡೆಯಿತು. ನೃಪತುಂಗನ ಮಾತಿಗೂ ಇಲ್ಲಿಗೂ ಎಲ್ಲಿಯ ಅಂತರ!

ಮುದ್ದಣನ ಕಾವ್ಯವನ್ನು ವಿಸ್ತರಿಸುವ ಉದ್ದೇಶವಾದರೂ ಯಾವ ದೇವರನ್ನೂ ಅರ್ಚಿಸಲಿಕ್ಕಿಲ್ಲ. ತಾನು ಹೇಳುವುದು "ಜಾರ ಚೋರರ" ಕಥೆಯಾದರೂ,

"ಸಕಲಾಂತರ್ಯಾಮಿ ಜೀವ ಪ್ರಕರ ವಿವಿಧ ಚೈತನ್ಯರೂಪಂ ಜಗದ್ವ್ಯಾಪಕ ಭಾವಂ ವಿಷ್ಣುವೆಂದು ಆಗಮತತಿ ಸತತಂ ಸಾರ್ವಸಂಬಂಧದಿಂ ಕೌತುಕದಿಂದೆ ಅವುದಂ ಬಣ್ಣಿಸಿದೊಡೆ ಅದು ಹರಿಸ್ತೋತ್ರಮ್..."

ಎಂದು ಎಳೆದು ನಾಸ್ತಿಕನಿಗೂ ಗಂಧ ಅಕ್ಷತೆಗಳನ್ನು ಹಚ್ಚುವ ಚೌಂಡರಸನ ಹವ್ಯಾಸ ಮುದ್ದಣನಿಗೆ ಬೇಕಿಲ್ಲ. ಅವನು ಕಾವ್ಯ ಹೇಳುವುದು "ಪಸಿವುಂ ಬಳಲ್ಕೆಯುಂ ಮುಡಿಯೆ ಕೆಳದಿ ನರುದಂಬುಲಮುಂ ಸವಿಯಲ್ಕೆ ಈಯುತಿರೆ" ಕೈಕೊಂಡ "ಸುಖಸಲ್ಲಾಪ".

ಅನಾವಶ್ಯಕವಾಗಿ ಪ್ರಸಂಗೋಚಿತವಾಗದೆ ಆದಿಯಲ್ಲಿ ಬರುವ "ಗಿರಿಪುರ" ಗಳ ವರ್ಣನೆಯೂ ಕೂಡ ಮುದ್ದಣನಿಗೆ ಬೇಕಿಲ್ಲ. ಬಂದ ಹಾಗೆ ವಸ್ತುಗಳ ಬಟವಡೆ ಅವನಲ್ಲಾಗಬೇಕು. ಪಾರಿವಾಳವನ್ನು ಹುಟ್ಟಿಸುವೆ ನೋಡು ಹೇಳಿ "ಇಸ್ಪೇಟ ಜಾದುವಿಗೆ" ಕೈಹಾಕುವ ಜಾದುಗಾರನ ಹಾಗೆ ಮುದ್ದಣನಿಗೆ ಜನರ ಸಹಜ ಕುತೂಹಲಕ್ಕೆ ತಣ್ಣೀರೆರಚುವದು ಬೇಕಿಲ್ಲ.

ರಾಮನ ಕಥೆಯ ಪ್ರಾರಂಭದಲ್ಲಿ ಗಿರಿನದಿಗಳ ಜಾತಕ ನಕ್ಷತ್ರಗಳೇಕೆ? ರಾಮನೇನು ಸಮುದ್ರದಲ್ಲಿ ಹುಟ್ಟಲಿಲ್ಲವಷ್ಟೇ?

ಅಂತಲೇ ಕವಿಯು

"ಶ್ರೀಮತ್ಸುರಾಸುರೇಂದ್ರ ನರೇಂದ್ರ...." ಎಂದು "ಉದ್ಯದ್ಯದ್ ಪ್ರಚಂಡ ಪ್ರಘಟನ ಸಘಟಿತ"ದಂಥ ದವಡೆಯ ಬಲವನ್ನು ತೋರಿಸುವ ಮೊದಲೇ ಸಹೃದಯ ಸರಸ್ವತಿ ಮನೋರಮೆ ಪೂರ್ಣವಿರಾಮ ಹೇಳುತ್ತಾಳೆ.

"ಓ........! ಓ....! ತಡೆ ತಡೆ; ವಸುಧೆಗೊಡೆಯನಪ್ಪ ರಾಮಚಂದ್ರನ ಕಥೆಯಂ ಪೇಳ್ ಎನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತ್ರೆಯಂ ಪೇಳ್ವುದೇಂ? ಸಾಲ್ಗುಂ"— ಫರ್ಮಾನ್ ಸಹಿಯಾಗಿ ಹೊರಬೀಳುತ್ತದೆ.... ಇದರಿಂದ ಮುದ್ದಣನಲ್ಲಿ ಇಂತಹ ವರ್ಣನೆಗಳು ತೀರ ಇಲ್ಲವೆಂದಲ್ಲ. ಅವುಗಳನ್ನು ಅವನು ಬಹುಮಟ್ಟಿಗೆ ನೈಸರ್ಗಿಕವಾಗಿ ಉಪಯೋಗಿಸಿಕೊಂಡಿದ್ದಾನೆ.

'ಮಹಾಕಾವ್ಯ'ವೆನ್ನಿಸಿಕೊಳ್ಳಲು ಬಾಯಿ ಎತ್ತಿದ ಕ್ಷಣವೇ "ಗಿರಿನಗರ"ಗಳ ವರ್ಣನೆ ಹೇಳಲು "ವೀಳೆಯನೆತ್ತಿದ" ಮಹಾಕಾವ್ಯಕ್ಕೂ ಮುದ್ದಣನ ಕಾವ್ಯಕ್ಕೂ ಇರುವ ಅಂತರ ಸಾಹಿತ್ಯದ ಹೊಸ ಕವಲನ್ನು ತೋರಿಸುತ್ತದೆ. ನೆರಳನ್ನೇ ಹಿಡಿದು ವೈಗರೆಯುವದು ಯೋಗ್ಯವಾಗದು. ಸುಭುಜನ ಕಥೆಯಲ್ಲಿ ಮುನಿಯ ಪ್ರಸ್ತಾಪ ಬಂದಾಗೂ ಅಷ್ಟೇ. ಮುನಿಯ ವಿಷಯವನ್ನು ಕೇಳಿದ ಮನೋರಮೆಗೆ ಉತ್ತರರೂಪವಾಗಿ

"ಈ ಧರಣಿಮಂಡಲ........" ಎಂದು ಕವಿಯು ಪ್ರಾರಂಭ ಮಾಡುತ್ತಲೇ ನಿಶಿತ ವಿಮರ್ಶೆಯ ಕಣೆಗಳು ಸಿದ್ಧವಾಗಿಯೇ ಇವೆ — "ಬಣ್ಣನೆಯ ಧರಣಿಮಂಡಲ ತರಣಿಮಂಡಲಗಳೇಕೆ? ತಿರುಳನೆ ಕೂಡಿ ಪೇಳಯ್."

ಕಾವ್ಯದಲ್ಲಿ ಕೂಡ ಔಚಿತ್ಯವರಿಯದ ಅತಿಯಾದ ವರ್ಣನೆಗಳು ಅವನಿಗೆ ಸೇರವು. ಊರಲ್ಲಿ "ಮಧ್ಯಾಹ್ನದ ವ್ಯವಸ್ಥೆಗಾಗಿ" ಆಪ್ತರ ಮನೆಯನ್ನು ಹುಡುಕ ಹೊರಟು, ಪರರ ಮನೆಯ ಬಣ್ಣ-ಚಂದಗಳಿಂದಲೇ ತೃಪ್ತರಾಗಿ ಅಲ್ಲಿಯೇ ನಿಂತವರನ್ನು ಯಾರೂ ಕಂಡಿಲ್ಲ. ತನ್ನ ಕಾವ್ಯದಲ್ಲಿ ಅತಿಯೆಂದು ಕಂಡ ವರ್ಣನೆಯ ಅರಿವೂ ಮುದ್ದಣನಿಗಿದೆ. ಅತಿಯಾಗಿ ಅರವಟ್ಟಿಗೆ ಕಾಡು-ಮೇಡುಗಳನ್ನು ವರ್ಣಿಸ ಹೊರಟ ಕವಿಗೆ ಮನೋರಮೆ

ಹೇಳುವ ಮಾತು ಇದು: "ರಮಣ, ಇದೇಂ? ನೋಳ್ಪುದು ನೋಳ್ಪುದು ಎಂದು ಪೊಳೆಯುಂ ಬೆಳೆಯುಂ ಆವುದಂ ಬಣ್ಣಿಸಲ್ ಪೋಪಯ್?.... ಆಗಳೆ ಪೇಳ್ವ್ವಿಯಲ್ತೆ ತನ್ನಿಂ ಮುಡಿಯದೆಂದು?" ಮುದ್ದಣನು ಎಷ್ಟೇ "ಕಂಡುಗಮುಂ ಬಳ್ಳದೊಳ್" ಅಳೆಯ ಬಯಸಿದರೂ, ರಾಮದರ್ಶನಾರ್ಥಿಯಾಗಿ ಬಂದ ಅಗಸ್ತ್ಯನು ತನ್ನ ಶಿಷ್ಯರಿಗೆ ಈ ರೀತಿ ತೋರಿಸಿ ವರ್ಣಿಸುತ್ತಿದ್ದನೆಂದಾಗ ಮಾತ್ರ ಮನೋರಮೆಗೆ ಸಮಾಧಾನ

ಶೈಲಿಯ ಸಂಸ್ಕೃತ ಮತ್ತು ಕನ್ನಡಗಳ ಹೊಂದಿಕೆಯ ಬಗ್ಗೆಯಾದರೂ ಮುದ್ದಣನಿಗೆ ಸ್ಪಷ್ಟ ವಿಚಾರವಿದೆ. "ಚಕ್ಷಣ ವಿಚಕ್ಷಣದ" ಸಂಸ್ಕೃತ ಶೈಲಿ "ನೀರಿಳಿಯದ ಬಾಯೊಳ್ ಕಡುಬಂ ತುರುಕಿದಂತೆ". ಪ್ರತಿಯೊಬ್ಬ ಹಾಟಿಲ್ ಮಾಣಿಯೂ ಸಂಸ್ಕೃತ ಶಾಸ್ತ್ರಿಗಳ ಮುಖಕ್ಕೆ ಕಪ್ಪು ಹಚ್ಚಲು ಯತ್ನಿಸಿದರೆ? ಪ್ರತಿಯೊಬ್ಬ ಆಫೀಸ್ ಸಿಪಾಯಿಯೂ ಪಾಣಿನಿಯ ಪೈಲ್ವಾನನಂತೆ ನುಡಿದರೆ? ಆ ಆ ಪಾತ್ರ ಪಾತ್ರ ಸನ್ನಿವೇಶಗಳಿಗೆ ಉಚಿತವಾಗಿ ಶೈಲಿ ನಿಲ್ಲಬೇಕು. ಅನೇಕ ಕನ್ನಡ ಕವಿಗಳು ತಮ್ಮ ತಮ್ಮ ನಾಡಿನ ತಿರುಳ್ಗನ್ನಡಕ್ಕಾಗಿ ಪೂಣ್ದು ಸಾಗಿದ್ದರೂ ಅದರ ಲಭ್ಯ ಕೆಲವರಿಗೇ ದೊರೆಯಿತೆಂದು ಕಾಣುತ್ತದೆ. ಸಂಸ್ಕೃತದ ಜಾಡಾಪತ್ತು ಅವರನ್ನು ಎಷ್ಟೋ ಮಟ್ಟಿಗೆ ಹೊರಬಿಡಲಿಲ್ಲ. ಅಂತಲೇ ಮನೋರಮೆ ಹೇಳುವುದು:—

"ತಿರುಳ್ಗನ್ನಡದ ಬೆಳ್ನುಡಿಯೊಳೆ ಪುರುಳೊಂದೆ ಪೇಳ್ವುದು. ಕನ್ನಡಂ ಕತ್ತುರಿಯಲ್ತೆ"? ಮುದ್ದಣನಾದರೂ "ಕರ್ಮಣಿಸರದೊಳ್ ಚೆಂಬವಳಂ ಕೋದಂತಿರೆ....ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆರೆಯೆ ತಿರುಳ್ಗನ್ನಡದಲ್ಲಿ" ಕಥೆಯನ್ನು ಹೇಳಲು ಪ್ರಾರಂಭಿಸುತ್ತಾನೆ

ಇದರಿಂದ ಮುದ್ದಣನಲ್ಲಿ ಸಂಸ್ಕೃತ ಪ್ರಯೋಗಗಳು ತೀರ ಇಲ್ಲವೆಂತಲ್ಲ. ಎಲ್ಲೆಲ್ಲಿ ಗಾಂಭೀರ್ಯ ರಾಜವೈಭವ ಬೇಕೆನಿಸಿದೆಯೋ ಅಲ್ಲಲ್ಲಿ ಆ "ನಲ್ನುಡಿ" ಗಳನ್ನು ಅವಶ್ಯವಾಗಿ ಅವನು ಉಪಯೋಗಿಸಿದ್ದಾನೆ. "ಸೇನಾಪಟಸಂಘಾತಸಂಜಾತರೇಣುಜಾತಮ್" ಅಲ್ಲಲ್ಲಿ ಇವೆ, ನಾಲ್ಕಾರು ಕಮಲ ಅರಳಿದಂತೆ, ಆದರೆ ಸುತ್ತಲೂ ಶುದ್ಧ ಕನ್ನಡ ಮಲ್ಲಿಗೆಗಳು. ಸಂಸ್ಕೃತ ಪ್ರಯೋಗಗಳು ಕೂಡ ಕನ್ನಡ ದೀಕ್ಷೆ ಪಡೆದು ಇವನಲ್ಲಿ ನಿಂತಿವೆ.

ಜಯಶ್ರೀ, ಗೆಲ್ಲವೆಣ್ಣು; ಪುನರ್ಜನ್ಮ, ಮಱುವುಟ್ಟು; ಧರ್ಮಘಾತಕ, ಅಱಗುಲಿ; ಬಾಡಬಾನಲ, ಮುನ್ನೀರ್ವೆಂಕಿ; ವಾಕ್ಯಗಳೂ ಕೂಡ ಹಾಗೇ; "ಕಡಲೆ ಕಡೆಯಾದ ಪೊಡವಿ" ಇತ್ಯಾದಿ.

ಈ "ಕರ್ಮಣಿಸರದ" ದೇಸಿಯಂತೂ ಮುದ್ದಣನಲ್ಲಿ ತುಂಬಾ ಇದೆ. ಶಬ್ದ, ವಾಕ್ಯ, ಮತ್ತು ಪಡೆಮಾತು—ಎಷ್ಟೋ ತಾಯ್ನೆಲದಿಂದ ಬಂದಿವೆ

"ಕೆಲರಂ ಬಿಗಿದಂ" "ಕೂಳ್ಕುಟಿಗೊಳ್" "ಪತ್ತೆಂಪಲವೇಂ" "ಏವೂರ" (ಯಾವ ಸಂಬಂಧ) "ಎಣ್ಣೆಸೀಗೆ";

ಬರಿಯ ಪದಗಳಷ್ಟೇ ಅಲ್ಲ ಕನ್ನಡ ಜನತೆಯ ದಿನದ ನುಡಿಗಳೆಷ್ಟೋ ಇವನಲ್ಲಿ ತುಂಬಿವೆ.

"ಕುರುಂಬನ ಕುತ್ತಕ್ಕೆ ಕುರಿಯ ಪಿತ್ತಮೆ ಮದ್ದಾಯ್ತು"
"ಇರುಳ್ ಕಂಡ ಬಾವಿಯೊಳ್‌ಪಗಲ್ ಬೀಳ್ದಂತೆ";—

ಮೊದಲಾದ ಅನೇಕ ಉದಾಹರಣೆಗಳನ್ನು ನೋಡಬಹುದು.

"ಮಳಲ್ ಹುರಿಗಡಲೆಯ ಮುಮ್ಮುರಿಯಾಯ್ತು." "ಉಗುರಿಂ ಚಿವುಡಲ್ಕಾಗುವೊಂದು ಕಜ್ಜಕ್ಕೆ ಕೊಡಲಿಯೊಂದು ನೆರವಂ ಪಾರ್ವರೆ?" "ಜೀಯ ರಕ್ಕಸರ್ಗಮ್ ಎಮಗಂ ಎಣ್ಣೆ ಸೀಗೆ" "ಸುಂಟಿಗೆ ಪಂಟಿಗೆ ಸಲ್ವಿನಂ"— ಎಲ್ಲವೂ ತಾಯ್ನೆಲದ ಅನುಭವ ಕಾದು ಕಾದು ಮಾಗಿದ ಸುಂದರ ಫಲಗಳು. ಎಲ್ಲ "ದೇಸಿಯನ್ನೂ" ಮುದ್ದಣಕವಿಯು ಸಂಸ್ಕೃತದ ನಲ್ನುಡಿಯೊಡನೆ, "ಮಾರ್ಗ"ದಲ್ಲಿ ಒಡಂಬಡಿಸಿದ್ದಾನೆ.

ಇನ್ನೂ ಒಂದು ದೃಷ್ಟಿಯಿಂದಲೂ ಮುದ್ದಣನ ಕಾವ್ಯದಲ್ಲಿ ಹೊಸ ದೃಷ್ಟಿಯನ್ನು ಕಾಣಬಹುದು. "ಚಿಃ ರಾಮನೋ ಭೀಮನೋ" ಎಂದು ವಿಮರ್ಶಿಸುವ ಎಂಟೆದೆಯಷ್ಟೇ ಅಲ್ಲದೆ, ಹಳೆಯ ಅತಿ ವ್ಯಕ್ತಿಪೂಜೆಗೂ ಇಲ್ಲಿ "ಅಪ್ಪಣೆ ಕೊಡಲಾಗಿದೆ". ಈ ಕಾವ್ಯದಲ್ಲಿಯೂ ಅನೇಕ "ಪವಾಡ" ಗಳಿದ್ದರೂ ವಾಸ್ತವವಾದದ ಮೊತ್ತಮೊದಲಿನ ಹೆಜ್ಜೆಯನ್ನು ನಾವಿಲ್ಲಿ ಗುರುತಿಸಬಹುದು........

ಯಾವ ದಾರಿ ಹಿಡಿದು ಹೋದರೂ ರಾಮಚಂದ್ರನ ಯಜ್ಞದ ಕುದುರೆಯನ್ನು ಯಾವ ನರಪಿಳ್ಳೆಯೂ ಕಟ್ಟಲಿಲ್ಲವೆಂಬ ಮಾತು ಮನೋರಮೆಯ ವಾಸ್ತವದೃಷ್ಟಿಗೆ ಸರಿಕಾಣದು. ಈ ಅದ್ಭುತರಮ್ಯ ವ್ಯಕ್ತಿಪೂಜೆ ಅವಳಿಗೆ ಒಗ್ಗದು.

"ಎನ್ನರಸ ನೀನೋರ್ವಂ ಅಪೂರ್ವ ಬಣ್ಣಗಬ್ಬಿಗರ ಬಲ್ಲಹಂ ಗಡ. ಷೋಷೋಪ ಬಟ್ಟೆಯೊಳ್ ಅಡವಿ ಬೆಟ್ಟುಗಳನೆ ಬಣ್ಣಿಪಯ್ .... ಅಶ್ವಂ ಎತ್ತಾನುಂ, ನಾಡಂ ಪುಗದೆ ?........ಏಂ ಬಲ್ಪುಳ್ಳ ರಾಯಂ ಕಟ್ಟಿಕಾದನೆ?" (ಹುಟ್ಟಿದ ರಾಜಕುಮಾರರೆಲ್ಲರೂ ವೀರರಾಗಿ ಕಾದಲೆಯುರನ್ನು ಅಗಲಿ ಪುನಃ ಹೊಂದುವದು ಬಹುಮಟ್ಟಿಗೆ ಅದ್ಭುತರಮ್ಯ ಪವಾಡ). ಮುದ್ದಣನಾದರೂ ಈ ವಾಸ್ತವ ದೃಷ್ಟಿಯನ್ನು ಗ್ರಹಿಸಿಯೇ ಉತ್ತರ ಹೇಳುತ್ತಾನೆ:–"ದಿನಪತಿಯು ಪೆಂಕುಳಿ ರಾಯುನೇಂ ಕಟ್ಟುಗುಂ ? "

ಕೊನೆಯದಾಗಿ, ಎಲ್ಲಿ ಕಥೆಯು ಬರಿಯ ಕಥನವಾಗಿ ಮಾನವ್ಯತೆಯ ದೈನಂದಿನ ಅನುಭವಕ್ಕೆ ಸನಿಹದಲ್ಲಿಲ್ಲವೆಂದು ಮನೋರಮೆಗೆ ಎನಿಸುವದೋ ಅಲ್ಲಿ ಅವಳಿಗೆ ಆಕಳಿಕೆ; ನಿದ್ರೆ. ಇಲ್ಲವಾದರೆ ವಿನೋದದ ನೆಪದಿಂದ ಕಥೆಯನ್ನು ಸ್ವಲ್ಪ ಬೇರೆ ದಾರಿಗೆ ಒಯ್ಯುವ ಸಾಹಸ.

ದಮನ ಮತ್ತು ಶತ್ರುಹರ ಸೈನ್ಯದ ಆರ್ಭಟೆಯನ್ನು ಮುದ್ದಣನು "ಕುಟ್ಟುತ್ತಿರುವಾಗ" ಮನೋರಮೆಗೆ ಅಲ್ಲಿಂದ ಎದ್ದು ಬಿಡಲೇ ಎನಿಸಿರಬಹುದು.... ಅವಳಿಗೆ ರುಚಿಸದ ವಿಷಯ, ಕಥನವೋ–ಅಂಬೆಗಾಲು ಕೂಡ ಇಲ್ಲ–ತೀರ ಹೊಟ್ಟೆ ಹೊಸೆಯುಹತ್ತಿದೆ. ಹೊರಗಿನ ಮಳೆಯಷ್ಟೇ ಒಳಗೂ ಬೇಸರ .... .... ಏನು ಮಾಡುವುದು ? ........ ಸರಿ, ಅವಳಿಗೆ ಒಳ್ಳೇ ನೆಪ ದೊರೆಯುತ್ತದೆ. ಕಥೆಯನ್ನು ಹೇಳುವ ಆವೇಶದಲ್ಲಿ ಕವಿಯು ಎಡವಿ "ದೇವಿ" ಎನ್ನುತ್ತಾನೆ........ ಆಕಳಿಕೆಯಾಗಬಹುದಾದ ಬೇಸರವು ವಿನೋದವಾಗಿ ಹೊರಬರುತ್ತದೆ; ಶೃಂಗಾರದ ಪುಷ್ಕರಿಣಿಯಾಗುತ್ತದೆ.

"ಆವ ದೇವಿ ? ಶ್ರೀದೇವಿ ಏಂ ಭೂದೇವಿ ? " (ಕಥೆಯಲ್ಲಿ ಉತ್ಸಾಹವುಳ್ಳವರಾರೂ ಇಂಥ ಪ್ರಶ್ನೆಯನ್ನು ಮಧ್ಯದಲ್ಲಿ ಕೇಳರು) !

"ನಿನ್ನನೇ ದೇವಿಯೆಂದು ಕರೆದೆ. "

( ಸರಿ ಅಪೇಕ್ಷಿಸಿದ ಬಳ್ಳಿ ತಾನಾಗೇ ಕಾಲಿಗೆ ತೊಡಕುತ್ತದೆ. )

" ಮೇಣ್ .... .... ಆವ ದೇವಿ ಆಂ ? "

(ಬೇಸರದ ನಿವಾರಣೆಗಾಗಿ ಅಲ್ಪವಿರಾಮ)

" ರತಿದೇವಿ "

"ಎಲೆ ಮದನ ಮೋಹನರಾಜ ! ಅಂತಿರ್ಪೊಡೆ ನೀಂ ಪೇಳ್ದ ರತಿಯನೆ

ಬಣ್ಣಿಸಿ ಪೊಗಳ್ .... .... ನೋಳ್ಪೆಂ''. ದಮನನ ಶೌರ್ಯದ ಕಥೆಗೂ ಈ ರತಿವರ್ಣನೆಯ ಶೃಂಗಾರದ ಚೆಲ್ಲಾಟಕ್ಕೂ ಯಾವೂರ ದಾರಿ? ವೀರರಸವು ನೆಲಕ್ಕಿಳಿದು ಶೃಂಗಾರವು ರಂಗಸ್ಥಲವನ್ನೇರುತ್ತದೆ × × × × ಹತ್ತಾರು ನಿಮಿಷ ಮಾತು ಸಾಗಿ ಬೇಸತ್ತ ಪಕ್ಷಿ ಹೇಗಾದರೂ ಹಾರಾಡಿ ಬಂದು ಕಥೆ ಸರಿಯಾದ ದಾರಿಯನ್ನು ಹಿಡಿಯಬಹುದೆಂದು ಪುನಃ ಕೂಡುತ್ತದೆ .... ಇದೇ ಅಲ್ಲವೇ ಕಾವ್ಯದಲ್ಲಿ “ ಕಾಂತಾ ಸಮ್ಮಿತತಯಾ ಉಪದೇಶ ” ಎಂದು ಹೇಳ ಬಹುದಾದುದು ?

ಆದರೆ ಮುದ್ದಣ್ಣನಿಗೆ ಈ ಕಾಂತಾಸಮ್ಮಿತದ...ಈ “ಕಳಿಕೆಯು—ಅರ್ಥ ವಾಗಲಿಲ್ಲವೆಂದು ಕಾಣುತ್ತದೆ ಶ್ರೋತೃಗಳು ಕೆಮ್ಮಿ ಗಡಿಯಾರವನ್ನು ನೋಡಿ ಕೊಂಡರೂ ಬಿಡದಿರುವ ಭಾಷಣಕಾರನ ಹಾಗೆ ವರ್ಣನೆ ಪುನಃ ಸಾಗುತ್ತದೆ.

“ಆ ವೇಳೆಯೊಳ್ ಶ್ರೀರಾಮನ ಬಳ್ಪಿನ ಕುದುರೆ .... .... ನುಡಿ ಕಿವಿ ವೊಳಗಂ ಪುಗುತರ್ಪ ಮುನ್ನವೆ—'' ಹದಿನೈದು ವಾಕ್ಯಗಳು ಸಾಗುವದ ರಲ್ಲಿಯೇ ಪುನಃ ಪ್ರಾರಂಭವಾಗುತ್ತದೆ .... ಅದೇ ನಿಶ್ಯಬ್ದತೆ ! .... ಅದೇ ದೂರ ಸುದೂರ ಪಡಿಗ ಡುತ್ತಲಿರುವ 'ಹೂಂಕಾರ'.... ಅದೇ ತೇಲುಗಣ್ಣು.... ಅದೇ ಝೋಲು.... ದಾಕ್ಷಿಣ್ಯಕ್ಕಾಗಿ ಪತಿಪರಾಯಣೆಯಾದ ಆರ್ಯಪತ್ನಿಯು ಎಷ್ಟು ಕಣ್ಣೊರಿಸಿಕೊಂಡು ಕುಳಿತಿರಬಹುದಾದರೂ ಕಥೆ ಮುಗಿಯದು. ಇದನ್ನು ಕಂಡೇ ಮುದ್ದಣನು ಬಹುಶಃ ಎಚ್ಚರಿಸಲು ಹೇಳಿರಬಹುದು.

“ ಕಾಂತೆ ಈಗಳ್ ಪೊಯ್‌ಕೆಯ್ಗೆ ಮೊದಲ್ '' .... .... ಎಲ್ಲವೂ ಗೋಲಗುಮ್ಮಟದ ಪ್ರತಿಧ್ವನಿ. ಮನೋರಮೆಗೂ ದಮನ ಶತ್ರುಹರ ಹೋರಾಟ ಬೇಕಿಲ್ಲ. ತನ್ನ ನಿದ್ರೆಯೊಡನೆ “ಪೊಯ್ಕುಯ್”........ ಗಂಡಿನ ತಾಳ್ಮೆಯನ್ನೆಲ್ಲ ಸಂಗ್ರಹಿಸಿ ಮುದ್ದಣ ಪುನಃ ಪ್ರಾರಂಭಿಸುತ್ತಾನೆ ಆದರೆ ಈ ಸಲ “ಹುಂಕಾರ” ಸಹಿತವಿಲ್ಲ. ನಿಶ್ಯಬ್ದತೆ ಶೂನ್ಯಕ್ಕೆ ತಿರುಗಿ ನಿಲ್ಲುತ್ತದೆ. ಎಲ್ಲವೂ ಗಾಢ ಮೌನ ಸಂಪೂರ್ಣ— ನಿರ್ಭೀತ— ಅನಿವಾರ್ಯ— ಸಾಂದ್ರನಿದ್ರೆ.... ಪ್ರತಿಭೆ ಸಾಗಿಯೇ ಇದೆ. ಬಳಿಯ ಸೌಂದರ್ಯ ನಿದ್ರೆಯಲ್ಲಿ ಲೀನವಾಗಿದೆ.... ಈ ಸಲವೇನು ಮಾಡುವದು ? ಕಥೆಯನ್ನು ನಿಲ್ಲಿಸಿ ಸತ್ಯಾಗ್ರಹ ಹೂಡಿಬಿಡುವದೇ ? ಸಾಧ್ಯವಾಗದು. ಸುಪ್ತಸೌಂದರ್ಯವನ್ನು ಚೇತರಿಸಲು ಯಾಚನೆಯೇ ದಿವ್ಯಾಸ್ತ್ರ. ನಿಧಾನವಾಗಿ ಪುರುಷನ ಪ್ರೇಮ ಪಾತ್ರ ಮುಂದು ಬರುತ್ತದೆ.

"ಸ....ಕ....ಲ....ಗುಣಸಂಪನ್ನೆ ....ಏಕ....ಗುಣ....ಹೀನೆ". ತೂಕಡಿ ಸುತ್ತಿದ್ದ ಪಕ್ಷ ಕಣ್ತೆರೆದು ಕೇಳುತ್ತದೆ.

"ಅಬ್ಬಾ ಎನ್ನ ಗುಣದೊಳ್ ಆವುದೊ ಹೀನಂ"? ಮುದ್ದಣನು ಅನಿರ್ಬಂಧ ಶರಣಾಗತಿಯನ್ನು ಸಾರುತ್ತಾನೆ.

"ನಲ್ಲತೆಯುಂ ಪೇಳ್ವರ ಕಣ್ಗೆ ಕಟ್ಟಿದಿರೊಳ್ ಪುರುಳನರಿಯದ ಗುಂಪಿನ ಗಾಡಬಾಕಿ ನಿದ್ರೆಯ ಬಿಣ್ಪಿಂ ತೂಕಡಿಪ ನಿನತೊಂದು ಗುಣಾ...." 'ನಲ್ಲತೆ' ಯನ್ನು ಹೇಳುವಾಗ ತೂಕಡಿಸುವದೇ ? ಅದೂ ಹೇಳುವವರ ಕಣ್ಣೆದುರಿಗೇ? ಆದರೇನು ? ಸುಪ್ತ ಸೌಂದರ್ಯಕ್ಕೆ ಮಾತು ಕಲಿಸಿ ಕೊಡಬೇಕಾಗಿಲ್ಲ. ಪ್ರಶ್ನೆಗಳ ವಿಷಯ ಬಂದಾಗಲೆಲ್ಲ, ಮುಕ್ಕಾಲು ಪಾಲು ಮನೋರಮೆ ಗೆಲ್ಲಲೇ ಬೇಕು. ಷಾ ಅವರು ಹೇಳುತ್ತಾರೆ: ಷೆಕ್ಸಪಿಯರ್ ರಾಜ್ಯದಲ್ಲಿ ಪುರುಷನು ಸಂಪಾದಿಸಬೇಕಾದ ವಸ್ತು; ಸ್ತ್ರೀ ಸಾಧಕ— ಎಂದು. ಇಲ್ಲಿ ಆ ನಿಯಮ ವಿಲ್ಲ. ಸ್ತ್ರೀ ತನ್ನ ಸೌಂದರ್ಯದಲ್ಲಿ ರಾರಾಜಿಸುತ್ತಾಳೆ. ಪುರುಷ ಪತಂಗ ದಂತೆ ಧಾವಿಸುತ್ತಾನೆ.... ಸರಿ, ಮನೋರಮೆಯ ಉತ್ತರ ಈ ಮಾತಿಗೆ ಸಿದ್ಧವೇ ಇದೆ. ಸುಪ್ತಸೌಂದರ್ಯದ ಕಣೆಗಳಿಗೆ ಸುಂಕವೇ ಇಲ್ಲ

"ತೂಂಕಡಿಸದೇವೆನೋ ? ಕಿವಿಗಳ್ಗೆ ಪುರುಳಂ ಅರದ ಗುರ್ದಿನಾಟದ ಬಱುರಗಳೆಯ ನಿಡುಗತೆಗೆ ?" ಮುದ್ದಣನ ನಲ್ಲತೆ "ಬಱುರಗಳೆಯ ನಿಡು ಗತೆ" !

"ನಿನಗೇಂ ವೀರರಸಂ ಮೆಚ್ಚದೆ ? " ಮುದ್ದಣ ಈ ಶಾಸ್ತ್ರೀಯ ಪ್ರಶ್ನೆ ಯಲ್ಲಿ ಹೊರದಾರಿ ಹುಡುಕುತ್ತಾನೆ. ಮನೋರಮೆಗೆ ಈ ರೇಷ್ಮೆಯ ಥಳಕು ಬೇಕಿಲ್ಲ. ಅವಳ ಉತ್ತರ ಸ್ಪಷ್ಟವಿದೆ

"ಮೆಚ್ಚು ಮುಚ್ಚು ಸುಳ್ಳು. ಎರ್ದೆವುಗುವ ಪೊಚ್ಚ ಪೊಸ ನಲ್ಲತೆ ಗಳಂ ಮೆಚ್ಚುವೆಂ" ಕಥೆ ಎರ್ದೆವುಗದಿರಲು ನಿದ್ರೆಯೇ ಸಂಭಾವನೆಯಲ್ಲವೇ? ಕಾವ್ಯದಲ್ಲಿಯ ಕೇವಲ ವರ್ಣನೆ ನಿಂತು "ಹೃದಯಸ್ಪರ್ಶಿ" ಯಾದ ಚಿತ್ರಣ ಬೇಕು.

ಸ್ತ್ರೀವರ್ಣನೆಯ ಕವಿಸಮಯವೂ ಮುದ್ದಣನಿಗೆ ಒಗ್ಗದು. ವಿಕ್ಟೋ- ರಿಯಾ ರಾಣಿಯವರ ನಾಣ್ಯವು ಅಂದು ಉಪಯುಕ್ತವಾಗಿದ್ದರೂ ಇಂದು ನಿಂತ ನಾಣ್ಯ ಬೆಳ್ಳಿಗಷ್ಟೇ ಇಂದು ಬೆಲೆ ನಾಣ್ಯಕ್ಕಿಲ್ಲ. "ಸಸಿಮೊಗ" "ಕಿಸುವಾಯ" "ಬಿಡುಜಡೆ" ಪಾಳುಬಿದ್ದ ಮನೆ. ಅಂತಲೇ ಮುದ್ದಣನು "ನುಡಿ ನಿಂ ಗೆಯುಂ ಬೆದಂಕಿಪಾರದಾತುಂ ಇರ್ದಂತೆ ಬಣ್ಣಿಪೊಂದು ಜಾಣ್ಮೆ ದೊರೆ

ಕೊಳ್ವಂತುಂ "ಬಣ್ಣಿಸಲು ಸಿದ್ಧನಾಗುತ್ತಾನೆ. ಮುದ್ದಣನ ವಾಸ್ತವವಾದ ಹೊಸದೃಷ್ಟಿಯನ್ನು ಪುನಃ ನಾವಿಲ್ಲಿ ಕಾಣಬಹುದು.

ಇದರಿಂದ ಮುದ್ದಣನಲ್ಲಿ ಕವಿಸಂಕೇತಗಳು ತೀರ ಇಲ್ಲವೆಂದಲ್ಲ. ಆದರೆ ಅವುಗಳ ಉಪಯೋಗದಲ್ಲಿಯೂ ಅವನ ಹೊಸ ದೃಷ್ಟಿಯನ್ನು ಕಾಣಬಹುದು. ಅವನ ಕಾವ್ಯದ ಪ್ರಾರಂಭವನ್ನೇ ತೆಗೆದುಕೊಳ್ಳಬಹುದು ವರ್ಷಾಕಾಲದ ಕವಿಸಂಕೇತವು ಇವನ ಕಮ್ಮಟದಲ್ಲಿ ಹೊಸ ಮುದ್ರೆಯನ್ನು ಧರಿಸಿದೆ. "ಓವೊ ಕಾಲ ಪುರುಷಂಗೆ ಗುಣಮ್ ಅಣಮ್ ಇಲ್ಲಮ್ ಗಡ" ಅಥವಾ ಇನ್ನೊಂದು. ಸಂಪಿಗೆಯ ತುಂಬಿಗೆ ಶಿರೋಭ್ರಮಣವನ್ನೊದಗಿಸುತ್ತದೆಂಬ ಸಂಕೇತವನ್ನು ಅವನು ಉಪಯೋಗಿಸಿದ ರೀತಿ ನೋಡಬಹುದು. ವಸಂತಕಾಲದ ಆಗಮನವು ವೈದ್ಯನ ಆಗಮನ ವಿದ್ದಂತೆ ದಾರಿಯುದ್ದಕ್ಕೂ ತನ್ನ ಜನರ ಯೋಗಕ್ಷೇಮ ನೋಡಿಕೊಂಡು ವಸಂತ ಬರುತ್ತಾನೆ. "ಪುಷ್ಪಗೂಳಿಯು ಲಪ್ಪ ಬಳಿದು ಮರಿದುಂಬಿಗಳೆ ಸಂಪಿಗೆಯತ್ತಣಿಂ ಒದವಿದ ಶಿರೋಭ್ರಮಣಮಂ ಅಟಿಸಿಯುಂ— "

ಅಂತೂ ಇಂದಿನ ಅನೇಕ ಸಾಹಿತ್ಯಕ ಪ್ರಶ್ನಾರ್ಥಗಳ— ಗದ್ಯದ ಮಹತ್ವವೇ ಆಗಿರಲಿ, ಕಾವ್ಯದ ಉದ್ದೇಶವಿಷಯುವೇ ಆಗಲೀ, ಪ್ರಾರಂಭದ ಋಜುತ್ವದ ಬಗ್ಗೆಯೇ ಆಗಲಿ, ವಾಸ್ತವತೆಯ ಭೂಮಿಕೆಯ ಬಗ್ಗೆಯೇ ಆಗಲೀ, ಕವಿಸಮಯಗಳ ಔಚಿತ್ಯದ ಬಗ್ಗೆಯೇ ಆಗಲೀ,— ಈಯೆಲ್ಲ ಪ್ರಶ್ನಾರ್ಥಗಳ ಮೂಲವನ್ನು ನಾವು ಮುದ್ದಣನಲ್ಲಿ ಕಾಣಬಹುದು. ಅವನು ಪ್ರಾಚೀನರಲ್ಲಿ ಕೊನೆಯವ; ಆಧುನಿಕರಲ್ಲಿ ಮೊದಲ ಹೊಸದೃಷ್ಟಿಯುಳ್ಳವ.

ಆದರೆ ಬರಿಯ ಉದ್ದೇಶದಿಂದಲೇ ಯಾರೂ ಕಾರ್ಯವನ್ನು ಸಾಧಿಸಿಲ್ಲ. ಇಚ್ಛೆ ಕುದುರೆಯಾಗಿದ್ದರೆ ಭಿಕ್ಷುಕರೂ ಸವಾರರಾಗಬಹುದಾಗಿತ್ತು. ಉದ್ದೇಶ ಕೃತಿಯ ಕೈಗಂಬ ಮಾತ್ರ. ಗ್ರಂಥದ ಸಂಚಕಾರ. ಕಾವ್ಯದ ಅಂತಿಮ ಶ್ರೇಯಸ್ಸು ಸಿದ್ಧಿಯನ್ನವಲಂಬಿಸಿದೆಯೇ ವಿನಾ ಬರಿಯ ಉದ್ದೇಶವನ್ನಲ್ಲ. ಈ ರೀತಿ ನೋಡಿದರೂ ಮುದ್ದಣನ ಪ್ರತಿಜ್ಞೆ ಬಹುಮಟ್ಟಿಗೆ ಫಲಿಸಿದೆ. ರಾಮಾಶ್ವಮೇಧವು ಬರಿಯ ಪ್ರಯೋಗದ ಒಂದು ಪ್ರದರ್ಶನದ ವಸ್ತುವಾಗಿರದೆ ಸತ್ವಯುತವಾಗಿದೆ. ಸನ್ನಿವೇಶ ವರ್ಣನೆ, ಶೈಲಿ, ಶೃಂಗಾರ, ಕರುಣೆ, ಸೀತಾಮಾತೆ ಮನೋರಮೆಯರಂಥ ಪಾತ್ರಗಳು–ಪ್ರತಿಭೆಯ ಕಿಡಿಯನ್ನು ನಿರ್ದುಷ್ಟವಾಗಿ ತೋರುತ್ತವೆ.

ರಾಮಚಂದ್ರನು ನಾವು ಆದರಿಸಲಾರದಂಥ ವ್ಯಕ್ತಿಯಾಗಿರಬಹುದು. ಅಲ್ಲಲ್ಲಿ ಶೈಲಿಯು ವೃತ್ಯನುಪ್ರಾಸವು ಬುಡಬುಡಿಕತನವಾಗಿರಬಹುದು. ಆದರೆ ಇದರಿಂದ ಇಡಿಯ ಕಾವ್ಯ ತೀರ ಸಾಮಾನ್ಯವಾಗುವ ಕಾರಣವೇನೂ ಇಲ್ಲ. ಚೌಕಟ್ಟು ಸುವರ್ಣದ್ದಿದ್ದಷ್ಟೇ ಚಿತ್ರವೂ ಬೆಲೆಯುಳ್ಳದ್ದಿದೆಯೆಂಬುದನ್ನೂ ನಾವು ಕಂಡುಕೊಳ್ಳಬಹುದು...... ... ಬೇಸತ್ತು ಹೊತ್ತುಹಾಕುತ್ತಿರುವ ಜನುಮದ ಮೇಳಕ್ಕೆ ಈ ಕಾವ್ಯವು ಎಷ್ಟೋ ಹೊಸ ದೃಷ್ಟಿಯನ್ನು ಕೊಡುತ್ತದೆ. ಮನಸ್ಸಿನಲ್ಲಿ ಉಳಿಯುವಂಥ ನಾಲ್ಕಾರು ಪಾತ್ರಪುತ್ಥಳಿಗಳನ್ನು ಈಯುತ್ತದೆ. "ನಾಡಿಂನಾಡಿಂಗೆ ಪಯಣಾ ಬಂದ ಬಟಿಕ್ಕೆ ಮುಡಿವನ್ನಂ, ಕೊಡಂಕೆ ನಲ್ಗತೆಯ ಪುರುಳಿಂ ತುಂಬುವನ್ನಂ, ಮನದ ಬಯಕೆ" ಬಹುಮಟ್ಟಿಗೆ ಅಳೆವನ್ನಂ ಕವಿ ಕಥೆಯನ್ನು ಸಾಗಿಸಿಕೊಂಡು ಹೋಗಿದ್ದಾನೆ. ಸಾಹಿತ್ಯದಲ್ಲಿ ಒಳ್ಳೆಯ ಸ್ಥಾನವನ್ನು ಪಡೆದಿದ್ದಾನೆ.

— —

# ಶೈಲಿ



ಮುದ್ದಣನ ಹೊಸಸೃಷ್ಟಿಯನ್ನು ನೋಡಿಯಾದ ಮೇಲೆ, ಅವನು ಆ ಪೂರ್ಣತೆಯನ್ನು ಯಾವ ರೀತಿ ಸಾಧಿಸಿದ್ದಾನೆಂಬುದನ್ನೂ ಮತ್ತು ಅವನ ಶೈಲಿಯ ಮುಖ್ಯ ಲಕ್ಷಣಗಳಾವು— ಎಂಬುದನ್ನೂ ನೋಡೋಣ:—

ಪಾಶ್ಚಿಮಾತ್ಯ ವಿಮರ್ಶಕರ ಪ್ರಕಾರ ಶೈಲಿಯು ಕವಿಯ ವ್ಯಕ್ತಿತ್ವದ ದ್ಯೋತಕವಾಗಿದೆ. ಫ್ರೆಂಚ ಲೇಖಕರ ಪ್ರಕಾರವಂತೂ "ಶೈಲಿಯೆಂದರೇ ಮನುಷ್ಯ" ಪ್ರತಿಯೊಬ್ಬ ಕವಿಯ ಶೈಲಿಯೂ ಅವನ ವ್ಯಕ್ತಿತ್ವದ ಲೋಲಕದಲ್ಲಿ ಹಾಯ್ದು, ಅವನ ಚಾರಿತ್ರ್ಯದ, ಭಾವನೆಗಳ ಮತ್ತು ಅವನ ಎನಿಸಿಕೆಗಳ ವರ್ಣವನ್ನು ಪಡೆದೇ ಹೊರಗೆ ಬರಬೇಕು. ಅಂತಲೇ ನಮ್ಮ ಪ್ರಾಚೀನ ಆಲಂಕಾರಿಕರು ಕೂಡ "ಶೀಲಸ್ಯ ಏವ ಶೈಲಿಃ"— ಎಂದು ಶೈಲಿಗೂ ಕವಿಯ ಶೀಲಕ್ಕೂ ಇರುವ ಸಂಬಂಧವನ್ನು ಸಾರಿದರು. ಹಾಗಾದರೆ ಈ ಅರ್ಥದಲ್ಲಿ ಮುದ್ದಣನ ಶೈಲಿಯ ಮುಖ್ಯ ಲಕ್ಷಣಗಳಾವು ?— ವಿಚಾರಿಸೋಣ.

ಮುದ್ದಣಕವಿ ತುಂಬಾ ರಸಿಕ; ಶೃಂಗಾರಪ್ರಿಯ; ಜೀವನದ ಕಷ್ಟ-ನಿಷ್ಠುರಗಳನ್ನು ಕಂಡು ಪ್ರೀತಿಯ ಆಸರಕ್ಕಾಗಿ ಹಾತೊರೆದವ; ಒಳ್ಳೆಯ ಬುದ್ಧಿವಂತ ಮತ್ತು ಅವಿರತನಾದ ಅಭ್ಯಾಸಿ.

ಮುದ್ದಣನ "ರಾಮಾಶ್ವಮೇಧ"ದಲ್ಲಿ ನಾವು ಈಯೆಲ್ಲ ಅಂಶಗಳನ್ನೂ ಕಾಣಬಹುದು

ಮನೋರಮೆಯೆಂದರೆ ಮುದ್ದಣನಿಗೆ ಅಡಿಮುಗಿಸಲಾರದಷ್ಟು ಪ್ರೀತಿ. ಅಂಥ ಶೃಂಗಾರದ ಕಣಿಯು ಕೂಡ ಎಷ್ಟು ಲಲ್ಲೆಯಂ ಮಾತನ್ನಾಡಿದರೂ ಅವನ ಮನಸ್ಸು ತೃಪ್ತಿಹೊಂದದು. "ಪಸಿವುಂ ಬಟಲ್ಕೆಯುಂ ಮುಡಿಯೆ, ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತಮಿರೆ" ಸುಖ ಸಲ್ಲಾಪವನ್ನು ಕೊಳ್ಳುವ ಮುದ್ದಣನಿಗೆ ತನ್ನ ಪ್ರೀತಿಯ ಹೆಂಡತಿಯನ್ನು ಎಷ್ಟು ವಿಧವಾಗಿ ಸಂಬೋಧಿಸಿದರೂ ಸಮಾಧಾನವಿಲ್ಲ. ಅವಳು ಅವನ

"ಒಚ್ಚೇರಗಣ್ಣ ಪೆಣ್ಣ"; "ನಿಚ್ಚ ನಿಡುಗುಂಕುಮದ ಬಿಂಕದ ಮೆಚ್ಚು-ಗಾರ್ತಿ"; "ರಾಮಾಭಿರಾಮೆ, ಸುಗ್ರೀವೆ, ನೀಲಕುಂತಳೆ.... ಕೇಸರಿಮಧ್ಯೆ.... ಅಂಗದ ವಿರಾಜಿತೆ".... ಇನ್ನೂ ಏನೇನೋ! ಅಷ್ಟೇ ಅಲ್ಲ; "ಅತ್ತೆಯ ಮಗಳೆ, ಮುತ್ತಿನ ಸೆಂಡೆ" ಎನ್ನುವ ವರೆಗೆ ಈ ಪ್ರೀತಿ ಹೋಗುತ್ತದೆ. ಇಂಥ ಮಾತನ್ನು ಕೇಳಿದ ಜನತೆ ನಕ್ಕರೇನಾಯ್ತು ? ಕವಿಯ ಮನಸ್ಸಿಗೆ ಮಾತ್ರ ಇದರಿಂದ ತುಂಬಾ ಸಮಾಧಾನವಿದೆ.

ಅಂತಲೇ, ಇಂಥ ಸುಂದರ ಪ್ರತಿಮೆಯನ್ನು ಬಿಟ್ಟು ಅವನು ಅರಗಳಿಗೆ ಕೂಡ ದೂರವಿರಲಾರ. ಅವಳ ಸಾನ್ನಿಧ್ಯವೇ ಅವನ ತಾರಕಯಂತ್ರ. ಅವಳ ಶ್ರೀಸನ್ನಿಧಾನದಲ್ಲಿಯೇ ಅವನ ನಾಲಿಗೆ ನಲಿಯಬೇಕು. ಅಂತಲೇ, ಕವಿ ಸೀತಾವನವಾಸದ ಕಷ್ಟಗಳನ್ನು ವಿವರಿಸಿ, ಶ್ರೀರಾಮಚಂದ್ರನ ನಿರ್ಘೃಣತೆಯನ್ನು ಹಳಿದು ಅಲ್ಲಿಗೇ ವಿಷಯವನ್ನು ಬಿಡುತ್ತಿಲ್ಲ. ಒಂದು ಅರಗಳಿಗೆ ಕೂಡ ತಾನು ಮನೋರಮೆಯನ್ನು ಬಿಟ್ಟಿರಲಾರೆನೆಂದು ಅವಳಿಗೆ ಆಶ್ವಾಸನ ಕೊಡುತ್ತಾನೆ:

"ಇಂತಿದು (ವಿಯೋಗದುಃಖಂ) ಸೋದರರಂ ಸೊಮ್ಮುಗಿಡಿಸಿದುದು. ಆಗಸ್ತ್ಯನಂ ನೆಲೆ ತಪಿಸಿದುದು. ಸಾಜಮಲೆ ಪತಿ ಪತ್ನಿಗಳೊಳ್ ವಿಯೋಗ ದುಃಖಂ! ರನ್ನೆ ಆನೊರ್ಮೆಯುಂ ನಿನ್ನನುೞಿದು ಬಾೞೆಂ. ಅಂತದಱಿಂ ಎಮ್ಮೊಳಾವಗಂ ಪುದುವಾೞ್ಕೆ ದೀರ್ಘಾಯುಮಂ ಶಿವಂ ನೆಲೆಗೆಯ್ಗೆ ಸ್ವಸ್ತಿ."

ಅದರಂತೆಯೆ, ಮಕ್ಕಳಾಗಲಿಲ್ಲವೆಂದು ಸೀತಾದೇವಿಯು ವ್ಯಥೆಪಡುತ್ತಿರುವದನ್ನೂ ಕೇಳಿರಿ ಕನ್ನಡ ಸಾಹಿತ್ಯ ಪ್ರಂಚದಲ್ಲಿ ಬರುವ ಇತರ ಸಾಂಪ್ರದಾಯಿಕ ವರ್ಣನೆಗಳಿಗೂ ಮತ್ತು ಇದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬಹುದು. ಯಾಕಂದರೆ ಸೀತಾದೇವಿಯ ವಿರಹವನ್ನು ವರ್ಣಿಸಿ ಕವಿ ಈ ಮಾತನ್ನು ಸೇರಿಸುತ್ತಾನೆ:—

"ಎನಿತ್ತೈಸಿರಿಯಿರ್ದೊಡಂ, ಮಕ್ಕಳಿಲ್ಲದವನ ಬಾೞ್ಕೆಯದೊಂದು ಬಾೞ್ಕೆಯೆ? ನಿಡುಮರನಂತಿರ್ದೊಡೊಂದಿರವೆ? .... .... ನಾಡೊಳ್ ಪುಟ್ಟಿಯುಂ, ಮಾನವ ನೆನಿಸಿಯುಂ ಮಕ್ಕಳಂ ಪೆಱದವಂ ಪಾಪಿಯಲ್ತೆ!" ಈ ಅಭಿಪ್ರಾಯವು ಸೀತಾದೇವಿಯದಿರಲಿ ಬಿಡಲಿ, ಮುದ್ದಣ ಮನೋರಮೆಯಂಥ ರಸಿಕ ನವದಂಪತಿಗಳಿಗೆ ತೀರ ಸಹಜವಾದದ್ದಲ್ಲವೇ?........

ಈ ರೀತಿ ಮುದ್ದಣನು ಭಾವನಾಪ್ರಧಾನನಾದರೂ, ತುಂಬಾ ಬುದ್ಧಿಶಕ್ತಿಯುಳ್ಳವ. ಮುದ್ದಣ–ಮನೋರಮೆಯರ ಸಂವಾದವು ಇಂಥ ಬುದ್ಧಿಮತ್ತೆಯ ಔತಣವಾಗಿದೆ. ಇವರ ಸಂವಾದಗಳನ್ನು ಓದುತ್ತಿರುವಾಗ ಯಾರಿಗೂ ಷೇಕ್ಸಪಿಯರ್ ಮಹಾಕವಿಯ Beatrice ಮತ್ತು Benedick ರ ನೆನಪಾಗದಿರದು. ಇಬ್ಬರೂ ಸುಂದರ ಪ್ರಣಯಿಗಳು. ಇಬ್ಬರೂ ಬುದ್ಧಿವಂತರು. ಆದರೆ ಷೇಕ್ಸಪಿಯರ ಮಹಾಕವಿಯ ಪ್ರಣಯಿಗಳಲ್ಲಿ ವಿವಾಹ—ಪೂರ್ವ ಪ್ರಣಯದ ರಭಸ ಹೆಚ್ಚು; ಮುದ್ದಣನಲ್ಲಿ ಇಂಥ ಬುದ್ಧಿಮತ್ತೆಯ ಜೊತೆಗೆ ಶಾಂತತೆ ಹೆಚ್ಚು. ಅಂತಲೇ ಷೇಕ್ಸಪಿಯರನ Beatrico—"...thus goes every one to the world but I, and I am sunburnt, I may sit in a corner, and cry Heigh-ho for a husband." ಎಂದು ಹೇಳಿದರೂ, "I was born to speak all mirth, and no matter" ಎಂದು ಹೇಳಬೇಕಾಯಿತು. ಆದರೆ ಜೀವನದ ಸುಖದುಃಖಗಳೆರಡೂ ಗೊತ್ತಿದ್ದ ಮುದ್ದಣನ ರಾಣಿಯ ಮಾತಿನಲ್ಲಿ ಆನಂದವೂ ಇದೆ; ಸತ್ವವೂ ಇದೆ. ಮುದ್ದಣನು ಕೊಡುವ ಮೆಚ್ಚನ್ನು ಕೇಳಿದಾಗ "ಪೆಱತೇಂ ? ಎನ್ನನೆ ನಾನೀವೆಂ" ಎಂದು ಹೇಳುತ್ತಾಳೆ. "........ಅಱಿಯಾ ಮುನ್ನಮೆ ನಿನ್ನ ತಾಯ್ತಂದೆವಿರ್ ಎನಗಿತ್ತರೆಂಬುದಂ? " "....ಆಂ ಪರಾಧೀನೆ ಗಡಾ ಪುರಾಣಂ ಓದಿದಿಂ ಬಱಿಯುಮಲ್ತೆ ದಕ್ಷಿಣೆಯನೀವುದು ?........ ಅನುಂ ಕತೆಯುಂ ಕೇಳ್ದು ಸೊಗಸಾಗೆ ಬಲ್ಲಂತೆ ಸಮ್ಮಾನಿಸುವೆಂ" ಇದೇ ಬುದ್ಧಿಮತ್ತೆಯನ್ನು ಸಪ್ತಾಕ್ಷರಿ ಮಂತ್ರದ ಸಂದರ್ಭದಲ್ಲಿಯೂ ಕಾಣಬಹುದು

ಆದರೂ ಮುದ್ದಣನ ಶೈಲಿಯಲ್ಲಿ "ದೋಷ"ಗಳಿಲ್ಲದೆ ಇಲ್ಲ ಪ್ರೊ. ಎಸ್. ವಿ. ರಂಗಣ್ಣ ಅವರು ಹೇಳುವಂತೆ ಅವನ ವಿಕ್ಷಿಪ್ತ ಪದಪ್ರಯೋಗವು ಅನೇಕ ಸಲ ಜಿಗುಪ್ಸೆಯನ್ನು ಹುಟ್ಟಿಸದಿರದು. ನಿಜವಾಗಿ ಸತ್ವಯುತನಾದ ವ್ಯಕ್ತಿಯ ವಿಕ್ಷಿಪ್ತತೆಗಳನ್ನು ಜನತೆಯು ಕೆಲಮಟ್ಟಿಗಾದರೂ ಸಹಿಸಿಕೊಳ್ಳುವಂತೆ, ಪದಪ್ರಯೋಗಗಳಲ್ಲು ಕೂಡ ಇಂಥ ಸತ್ವಾಂಶವಿದ್ದರೆ ಮಾತ್ರ ಓದುಗರು ತಡೆದುಕೊಳ್ಳಬಹುದು.

ಲೋಪಾಮುದ್ರಾಪತಿ, ಮುದ್ರಾವರುಣೆ, ವಿಂಧ್ಯದ್ರೋಜ ಮೊದಲಾದಂಥ ಪ್ರಯೋಗಗಳಾಗಲಿ; ಕಮಲವಿಲೋಚನೆ, ಕೌಸುಂಭಾಂಬರ,

ಸೇನಾಪದಸಂಘಾತಸಂಜಾತರೇಣುರೇಣು ಜಾತ — ಮೊದಲಾದ ಸುಂದರ ಸಂಸ್ಕೃತ ಪ್ರಯೋಗಗಳಾಗಲೀ, ನಿಜವಾಗಿ "ರನ್ನವಣಿಯುಂ ಪೊನ್ನಿಂ ಬಿಗಿಯ"ಲು ಮುದ್ದಣನು ಯತ್ನಿಸಿದ್ದಕ್ಕೆ ಒಳ್ಳೆಯ ಸಾಕ್ಷಿ.

ಆದರೆ, ದುರ್ದೈವದಿಂದ ಇದೇ ಮಾತು ಉಳಿದ ವಿಕ್ಷಿಪ್ತ ಪ್ರಯೋಗಗಳಿಗೆ ಅನ್ವಯಿಸುವದಿಲ್ಲ. ಪ್ರೊ. ರಂಗಣ್ಣ ಅವರು ಹೇಳುವಂತೆ ಅವನ ಆ ಕಿರ್ಚು, ಬೆರ್ಚು ಮೊದಲಾದ ಸರೇಫ ಪ್ರಯೋಗಗಳು ಅನೇಕ ಸಲ ನಮಗೂ "ಪುರ್ಚ"ನ್ನು ಹುಟ್ಟಿಸಬಹುದು "ಕರ್ಮಪುರುಷಂಗೆ ಸೊರ್ಕುಂ ಸಿರ್ಕುಂ ಎಂದು ಇರ್ಕಣ್ಣಿಲ್ಲೆ!"— "ಕರ್ನೆಲದೆ ಕೊರ್ವಿ ಬೆಳೆದ ಕರ್ವಿನ ತನಿರಸಕ್ಕೆ ಪೆರ್ಮರನ ಪಾಱುಗೊಂಬಿನೊಳ್ ಉರ್ಕುಂ ಸೊರ್ಕುಂ ಸೇರ್ದು" ಅಯ್ಯೋ ಸರೇಫ! ಎನಿಸುತ್ತದೆ.

ಮುದ್ದಣನ ತದ್ಭವಗಳ ವಿಷಯವೂ ಅಷ್ಟೇ. ಎಷ್ಟೋ ಸಲ ಮುದ್ದಣನು ಆಂಡಯ್ಯನನ್ನು ಸಹ ಮೀರಿಸಿಬಿಟ್ಟಿದ್ದಾನೆ. ಮಾರ್ಗದಲ್ಲಿದ್ದ ಪ್ರಯೋಗಗಳನ್ನು ಬಿಟ್ಟಾದರೂ ಮುದ್ದಣನು ಇಂಥ ಚಾಪಲ್ಯವನ್ನು ಸಾಧಿಸಲೆತ್ನಿಸಿದ್ದಾನೆ. ಇವೆಲ್ಲ "ಜವಹುರಕೊಯ್ಯಲು ಮುಚ್ಚಿತರುವ ಬಾಗುಳದ ಬೀರ"!

ಮುದ್ದಣನ ಅನೇಕ "ತಿರುಳ್ಗನ್ನಡ" ಪ್ರಯೋಗಗಳು ಕೂಡ ಅವನ ಈ ವಿಕ್ಷಿಪ್ತತೆಯ ಸ್ಮಾರಕಗಳೇ ಆಗಿವೆ. ಇವುಗಳಿಂದ ಶೈಲಿಯ ಗಾಂಭೀರ್ಯಕ್ಕಾಗಲೀ ಇಲ್ಲವೆ ನಿಜವಾದ ಕನ್ನಡ ಶೈಲಿಯ ಸೊಬಗಿಗಾಗಲೀ ಸಹಾಯವಾಗುವಂತಿಲ್ಲ. ಇದಕ್ಕೆ ಅವನ ಶುದ್ಧ ಕನ್ನಡಸಂಗಾತಿಗಳಾದ "ಚಟಕೆ, ಬೋಟಿ, ಗೋಣ್ಣವಿರ, ಸಱುಮಿಂಡಿಯರೇ" ಸಾಕ್ಷಿ.

ಅನೇಕ ಸಂಸ್ಕೃತ ಪ್ರಯೋಗಗಳನ್ನು ಶುದ್ಧ ಕನ್ನಡಕ್ಕೆ ತಿರುಗಿಸಿಕೊಳ್ಳುವದರಲ್ಲಿ ಮುದ್ದಣನು ತನ್ನ ಶೈಲಿಯ ಹಿರಿಮೆಯನ್ನು ಮೆರೆದದ್ದೇನೋ ನಿಜ; "ಜಯಶ್ರೀ" ಎಂಬುದನ್ನು "ಗೆಲ್ಲವೆಣ್" ಎಂದು ಹೇಳುವಲ್ಲಾಗಲೀ, "ಪುನರ್ಜನ್ಮ"ವನ್ನು "ಮಱುವುಟ್ಟು" ಎಂದು ಭಾಷಾಂತರಿಸುವಲ್ಲಾಗಲೀ, "ಮಾಣಿಕ್ಯ" "ಧರ್ಮಪಾತಕ" "ಕುಲಗುರು" ಮೊದಲಾದ ಪದಗಳನ್ನು "ಕೆಂಬರಲು" "ಅಱಿಗುಲಿ" "ಬಟುಯೋಜ" ಎಂದು ಹೇಳುವಲ್ಲಾಗಲೀ, ಮುದ್ದಣನು ತನ್ನ ಪ್ರತಿಜ್ಞೆಯನ್ನು ಬಹುಮಟ್ಟಿಗೆ ಸಾಧಿಸಿದ್ದಾನೆ.

ಆದರೆ, ಇದೇಮಾತು ಮಾರ್ಗದಲ್ಲಿದ್ದ ಸುಂದರ ಪದಗಳನ್ನು ಬಿಟ್ಟು, ಬೀದಿಯ ಆಚೆಗಿನ ಹಲವು ವಿಕ್ಷಿಪ್ತ ಕನ್ನಡ ಪ್ರಯೋಗಗಳನ್ನು ಹಿಡಿತರುವು ದಕ್ಕೆ ಅನ್ವಯಿಸುವದಿಲ್ಲ ಹೀಗಾಗಿ, ಮಾನಸ್ಥರಾದ ರಾಮ, ಗಣಪತಿ, ವಿಷ್ಣು, ಶಿವ, ಯಮ-ಮೊದಲಾದವರು ತಮ್ಮ ಸುಸಂಸ್ಕೃತ ಉಡುವು ತೊಡವುಗಳನ್ನು ಬಿಟ್ಟು ಮುದ್ದಣನು ಧರಿಸಹೇಳಿದ ಮೊಹರಮ್ಮದ "ಫಕ್ಕಿ-ಬಾವ"ಗಳ ಗಡ್ಡಮೀಸೆಗಳನ್ನು ಧರಿಸಬೇಕಾಗುತ್ತದೆ. ಹೀಗಾಗಿ, ಮುದ್ದಣನ ಈ ಭಾಷಾಮೋಧದಲ್ಲಿ ರಾಮನು 'ಬೆಲ್ಲಂಗೋಲ್ವಿಲ್ಲ' ನಾಗುತ್ತಾನೆ; ಭಗವಾನ್ ವಿಘ್ನವಿನಾಯಕನು "ಗಂದರಗಿವಿಯು" ನಾಗುತ್ತಾನೆ; ಪುಣ್ಯ ದೇವತೆಗಳಾದ ಬ್ರಹ್ಮ, ಶಿವ, ವಿಷ್ಣು, ಯಮರು ಅನುಕ್ರಮವಾಗಿ "ತಲೆವೊಂಕ" "ಬಾಂಬೊಚ್ಚತಲೆಯ" "ಪಕ್ಕಿದೇರ" "ನೇಣ್ಗೆಯ್ಯ"ರೆಂಬ ಬಿರುದನ್ನು ಪಡೆಯುತ್ತಾರೆ ಇದೂ ಅಲ್ಲದೆ ಮುದ್ದಣನ ದೇವತಾಸೃಷ್ಟಿಯಲ್ಲಿ "ಪೂವೊಕ್ಕಳ"ರೂ "ತಗದೇರ"ರೂ "ಇಲಿದೇರ"ರೂಇಲ್ಲದಿಲ್ಲ. ಇಂಥ ಪ್ರಯೋಗಗಳು ಭಾಷೆಯ ವೈಭವದಕಿಂತ ವಿಕ್ಷಿಪ್ತತೆಯ ದ್ಯೋತಕಗಳಾಗಿವೆ ಇದರಂತೆಯೇ ತುಳುಸಮಾನವಾದ ಅರ್ಬಿ ಇಜಿಾಸಲಗಳನ್ನೂ ಮರಾಠಿ ಹತ್ತಿರದ 'ಮಂಕಡ' ಗಾಡಬಗಳನ್ನೂ ನೋಡಬೇಕು.

ಇದೇ ಅಭಿಪ್ರಾಯವು ಮುದ್ದಣನ ವೀರ ಶೈಲಿಗೂ ಅನ್ವಯಿಸುತ್ತದೆ. 'ಭಾವ' ಮತ್ತು 'ಧ್ವನಿಗಳ' ಸರಿಯಾದ ಹೊಂದಿಕೆಯಿದ್ದರೇ, ಒಂದು ವಿಚಾರದ ಅಭಿವ್ಯಕ್ತಿಯು ಪರಿಪೂರ್ಣವಾಗುತ್ತದೆ. ಅದು ಇಲ್ಲದಿದ್ದಲ್ಲಿ ಭಾವ ಮತ್ತು ಧ್ವನಿಗಳ ಅರಕಳಿ ಮುರಕಳಿತನವು ಮಾತ್ರ ಒಡೆದು ಕಾಣುತ್ತದೆ. ಆದ್ದರಿಂದ ವೀರರಸವನ್ನು ವರ್ಣಿಸುವಾಗ ಪದಪ್ರಯೋಗವೂ ಅದರಲ್ಲಿ ಅವಿತಿದ್ದ ಭಾವವೂ ಕೂಡಿಯೇ ಅದಕ್ಕೆ ಹೆಚ್ಚಿನ ಬೆಲೆಯನ್ನು ತಂದು ಕೊಡಬೇಕು. ಭಾವವಿಲ್ಲದ ಶಬ್ದ ಗೀರ್ಗುಂಫನವು ಹೇಯವಿದ್ದಂತೆಯೇ, ಒಳಗಿನ ಭಾವವಿದ್ದೂ ಸರಿಯಾದ ವಾಹಕವಿರದ ಪದಪ್ರಯೋಗವಿದ್ದರೆ— ಅದೂ ಅಷ್ಟೇ ಗೌಣವಾದುದು.

ಈ ಹಿನ್ನೆಲೆಯಲ್ಲಿ ಮುದ್ದಣನು ವೀರರಸವನ್ನು ಚಿತ್ರಿಸಿದ ಬಗೆಯನ್ನು ನೋಡಿದರೆ ಮನಸ್ಸು ಎಂದಿಗೂ ಕುದಿಗೊಳ್ಳದು. ಉದಾಹರಣೆಗೆ ಶತ್ರುಘ್ನ ಮತ್ತು ಕುಶರ ನಡುವಿನ ಕಾಳಗದ ಸಂದರ್ಭವನ್ನೇ ನೋಡೋಣ. ಇಬ್ಬರೂ ತಮ್ಮ ಪಕ್ಷದ ಹತಿಗಾಗಿ ಕನಲಿ, ಕೆಂಕಾಗಿ ನಿಂತಿದ್ದಾರೆ. ಕೆರಳಿ ಮುಂಬಂದ

ಶತ್ರುಘ್ನನ ರೋಮರೋಮಗಳಲ್ಲೆಲ್ಲ ರೋಷವು ಕಣೆಗಟ್ಟಿ ನಿಂತಿದೆ. ಆಗ ಅವನು ಘೂತ್ಕರಿಸುವ ವಿಸ್ಫುಲಿಂಗಗಳಿವು:

"ಎಲೆಲೆ ಮುಟ್ಟು ಮೀಱಿದ ಮಾಯದ ಬಾಲಕ! ನೀಂ ದಿಟ್ಟಂ ದಿಟ್ಟ ಮಾದೊಡೆನ್ನೀ ಕಷ್ಟಸುಗೆಯು ಕೋಲಾ ಮುಟ್ಟೆ ಮುಱಿವುದು"— ಎಲೆಲೆ ....ಬಾಲಕ! ಏನು ವೀರಾವೇಶ!....ನೀಂ ದಿಟ್ಟಂ—ಕುಶನ Certificateಉ. ಮೇಲೆ ಯಕ್ಷಗಾನದ 'ಟ್ಟ'ಕಾರ ಬೇರೆ. ಇಡೀ ಕನ್ನಡ ಸಾಹಿತ್ಯ ಪ್ರಪಂಚ ದಲ್ಲೇ ಬಹುಶಃ ಇಷ್ಟು ನಯವಿನಯದ ಭಾಷೆಯಲ್ಲಿ ಯಾವ ವೀರರೂ ಕಾದಿರ ಲಿಕ್ಕಿಲ್ಲ. ಇದಕ್ಕೂ ರನ್ನ, ಪಂಪ, ಲಕ್ಷ್ಮೀಶರ ಶೈಲಿಗೂ "ಯಾವೂರ ಕೊಳ್ಕೊಡೆ!"

ಇದೇ ಸಂದರ್ಭದಲ್ಲಿ ಮುದ್ದಣದ ಶೈಲಿಯಲ್ಲಿ ಕಂಡುಬರುವ ಇನ್ನೊಂದು ಅಂಶದ ಬಗ್ಗೆಯೂ ಎರಡು ಮಾತುಗಳನ್ನು ಹೇಳಬೇಕು. ಅದೆಂದರೆ ವೃತ್ಯನುಪ್ರಾಸಕ್ಕಾಗಿ ಮುದ್ದಣನಲ್ಲಿರುವ ಅಪಾರ ಆದರ. ಒಂದು ವರ್ಣವು ಸಿಕ್ಕರೆ ಸಾಕು; ಮುದ್ದಣ ಅದರ ಕತ್ತು ಹಿಸುಕದೆ ಬಿಡ. ಚಿಕ್ಕಮಗು ಗಳ ಹಾಗೆ ಅದನ್ನು ಹಾಗೆ ಹೀಗೆ ತಿರುಗಿಸಿ, ಅದೇ ವರ್ಣದ ನೂರು ಶಬ್ದಗಳ ಜೊತೆಗೆ ಅದನ್ನು ಕೂಡಿಸಿ, ಇಟ್ಟು ನೋಡಿ ಆನಂದಪಟ್ಟ ಹೊರತು ಅವನಿಗೆ ಸಮಾಧಾನವಿಲ್ಲ. ಉದಾಹರಣೆಗೆ ರಾಮಾಶ್ವಮೇಧದ ಪುಟ ೬೩ರಲ್ಲಿ ಬರುವ "ಬ" ವರ್ಣದ ದುರ್ಗತಿಯನ್ನು ನೋಡಬೇಕು. ಉಳಿದ ಯಾವ ಕಾರಣ ಕ್ಕಾಗಿ ಅಲ್ಲದಿದ್ದರೂ, ಈ "ವರ್ಣಮೋಹ"ಕ್ಕಾಗಿ ದಾರಿಯಲ್ಲಿ ಬರುವ ಸುಂದರ ಸ್ತ್ರೀಯು "ಬಿಡುಜಡೆಯ ಬಿದುಮೊಗದ ಬಿರಿದೆಸಳ್ಗಣ್ಣ........ಬಿಂಗ ಗೆಕ್ಕೆಯ ಬಿಂಬಾಧರದ ಬಿಲ್ವಸ್ತನದ ಬಿಣ್ಪೊಡೆಯ ಬಡವಾಸೆಯ ಬವಿ ಲ್ನಡುವಿನ ಬಾಲೆ"ಯಾಗುತ್ತಾಳೆ. ಈ ಸಾಲಿನಲ್ಲಿ ೧೪ಕ್ಕೆ ಕಡಿಮೆಯಿಲ್ಲ ದಷ್ಟು 'ಬ'ಕಾರಗಳು ಬರುತ್ತವೆ. ಇಲ್ಲಿಗೇ ಕಿಟೆಲ್ಲ ಕೋಶದ ಪುಟ ತೀರಿ ತೆಂದು ಕಾಣುತ್ತದೆ. ಇದರಂತೆಯೇ "ಬೆಂಗದಿರನ ಬೊಂದಿಯಂ ಬಂದಿವಿಡಿ ಯುವ" ವ್ಯಾಪಾರಕ್ಕೇನೂ ಕಡಿಮೆಯಿಲ್ಲ. ಇಂಥ ವರ್ಣಗಳ ಹಾಣಾಹಾಣಿ ಗಾಗಲಿ, ಕೋಶದ ಕಸರತ್ತಿಗಾಗಲೀ ಮುದ್ದಣ ಸದಾ ಸಿದ್ಧ. ಇಂಥ ಕ್ಷುದ್ರ ಕವಡಿಯ ಮಾಲೆಯನ್ನು ಧರಿಸಲು ಮುದ್ದಣನಂಥ ಪ್ರತಿಭಾವಂತ ಕವಿಯು ಕೂಡ ತನ್ನ ಕಾವ್ಯ-ಸಾಮ್ರಾಜ್ಯದ ಸುವರ್ಣ ಸಿಂಹಾಸನವನ್ನು ಬಿಟ್ಟು ಕೆಳ ಗಿಳಿದು ಬರುವುದು ನಿಜವಾಗಿಯೂ ಆಶ್ಚರ್ಯದ ಮಾತೇ ಸರಿ! ೯೬ನೇ

ಪುಟದಲ್ಲಂತೂ ಮೂರು ವರ್ಣಗಳ ಸಾವು ಬದುಕಿನ ಪಂದ್ಯಾಟವಿದೆ. ಈ ಪುಟದಲ್ಲಿ "ಕರವೊಪ್ಪುವ ಕಾರಾನೆಯು ಕಾಳಸಿಂಗನ...." ಎಂದು ಮೊದಲಾಗಿ ಕಕಾರವು ೧೧ ಸಲ ಬರುತ್ತಿದ್ದರೆ, ಅದರ ಎರಡರಷ್ಟು—ಅಂದರೆ ೨೨ ಸಲ—ಡಕಾರವೂ, ಮತ್ತು "ಚಲ್ಲದಿಂ ನಲ್ಲಳ್ವಿರಸು ಮೆಲ್ಲಮೆಲ್ಲನೆ ಲಲ್ಲೆಗರೆವ" ಎಂದು ೩೦ ಸಲ "ಲ್ಲ" ಕಾರವೂ ಬರುತ್ತವೆ!

ಇದು ಮುದ್ದಣನದೇ ಸಂಪೂರ್ಣ ದೋಷವೇನೂ ಅಲ್ಲ ಇದಕ್ಕೆ ಬಹುಶಃ ಮುದ್ದಣನು ತನ್ನ ಕಾಲದಲ್ಲಿ ನೋಡಿದ ಯಕ್ಷಗಾನಗಳ ಪ್ರಭಾವವೇ ಕಾರಣವೆಂದು ತೋರುತ್ತದೆ. ಮೊನ್ನೆಮೊನ್ನೆಯವರೆಗೂ "ರಾಮನೇನು! ಹಾಲಗೇರಿ ಮೀನು" ಎಂದು ಹೇಳುವ ಬಯಲಾಟಗಳಿಗೂ, "ಅತಳ ವಿತಳ ರಸಾತಳ ತಳತಳ ಪಾತಾಳಗಳ" ವರ್ಣನೆ ಮಾಡುವ ದಶಾವತಾರದ ಆಟಗಳಿಗೂ ಕೊರತೆಯಿರಲಿಲ್ಲ. ಅಷ್ಟೇ ಅಲ್ಲ. ಈ ಪ್ರಭಾವವು ೨೦ನೇ ಶತಮಾನದ ಆದಿಯಲ್ಲಿ ಬರೆದಿರುವ ಗಣ್ಯ ಲೇಖಕರಾದ ಕೆರೂರ ವಾಸುದೇವಾಚಾರ್ಯ ಮತ್ತು ವೆಂಕಟರಂಗೋ ಕಟ್ಟಿ ಅವರಲ್ಲಿಯೂ ಅನೇಕ ಸಲ ಕಂಡು ಬರುತ್ತದೆ. ಹೀಗಾಗಿ, ಯುಗಧರ್ಮವಾಗಿರಬಹುದಾದ ಒಂದು ವೈಶಿಷ್ಟ್ಯದ ಬಗ್ಗೆ ನಾವೇನೂ ಅತಿ ಕ್ರೂರವಾಗಬೇಕಿಲ್ಲ.

ಈ ವಿವರಣೆಯಿಂದ ಮುದ್ದಣನ ಶೈಲಿಯು ಒಳ್ಳೆಯ ಗುಣಗಳೇನೂ ಇಲ್ಲವೆಂದು ಸರ್ವಥಾ ಭಾವಿಸಲಾಗದು. ಮುದ್ದಣನು ಇಟ್ಟುಕೊಂಡ ಹೊಸ ದೃಷ್ಟಿಗೆ ಅನುಗುಣವಾಗಿ ಅವನ ಶೈಲಿಯು ಕೂಡ ಈ ಪ್ರತಿಜ್ಞೆಯನ್ನು ಎಷ್ಟರ ಮಟ್ಟಿಗೆ ಯಶಸ್ವಿಯಾಗಿಸಿದೆಯೆಂಬುದನ್ನು ಅರಿತುಕೊಳ್ಳುವುದಕ್ಕಾಗಿ ಈವರೆಗೆ ಮಾರ್ಗವನ್ನು ಕ್ರಮಿಸಿದ್ದಾಯಿತು. ಆದ್ದರಿಂದ ತಪ್ಪು ಅವಧಾರಣೆಗೆ ಎಡೆಗೊಡಬೇಕಾಗಿಲ್ಲ. ಮುದ್ದಣನ ಶೈಲಿಯ ಒಳ್ಳೆಯ ಗುಣಗಳಾದ ಅವನ ರಸಿಕತೆ, ಶೃಂಗಾರ ಮತ್ತು ಬುದ್ಧಿಶಕ್ತಿಗಳನ್ನು ಈ ಮೊದಲೇ ನೋಡಿದ್ದೇವೆ. ಹೊಸ ಹೊಸ ಪದಗಳನ್ನು ನಿರ್ಮಿಸಿಕೊಳ್ಳುವಲ್ಲಿಯ ಅವನ ಕನ್ನಡ ದೃಷ್ಟಿಯನ್ನೂ, ಲೋಕೋಕ್ತಿಗಳಲ್ಲಿ ಕಂಡುಬರುವ ಅವನ ಲೋಕಾನುಭವವನ್ನೂ ಕೆಲಮಟ್ಟಿಗೆ ಈ ಮೊದಲೇ ಗುರುತಿಸಿದ್ದೇವೆ. ಇದೂ ಅಲ್ಲದೆ ಇನ್ನೂ ನಾಲ್ಕಾರು ಒಳ್ಳೆಯ ಗುಣಗಳನ್ನು ಪಡೆದ ಅವನ ಸಾಹಿತ್ಯ ಶೈಲಿ ಸರ್ವಥಾ ಸಾಮಾನ್ಯ ದರ್ಜೆಯದಾಗದು.

ಇಂದಿನ ಸುಸ್ಪಷ್ಟ ಕನ್ನಡದ ಬರವಣಿಗೆ ಮುದ್ದಣನಿಂದಲೇ ಪ್ರಾರಂಭವಾಯಿತೆಂದು ಹೇಳಬಹುದು. ಹಿಂದಿನ ಚಂಪೂಗ್ರಂಥಗಳ ಉಸಿರುಗಟ್ಟುವ ವಾಕ್ಯಗಳೂ, ಸಮುಚ್ಚಯಗಳೂ ಇಲ್ಲಿ ಪೂರ್ಣವಿರಾಮಕ್ಕೆ ಎಡೆಗೊಟ್ಟವೆ. ಹಲಕೆಲವು ವಾಕ್ಯಗಳಂತೂ ತೀರ ಚಿಕ್ಕವಾಗಿ ಸಲೀಲವಾಗಿವೆ. "ಲೋಗರ್ ಕೃಷ್ಣಗೊಂಡರ್, ಭಾಸ್ಕರನಾಗಳುಂ ಕಾಯ್ಪಿನೊಳಿರ್ದಂ" ಇತ್ಯಾದಿ.

ಇದು ಅಲ್ಲದೆ, ಇಂಥ ಚಿಕ್ಕ ಚಿಕ್ಕ ವಾಕ್ಯಗಳಿಂದ ಮುದ್ದಣನು ತನ್ನ ಶೈಲಿಯ ಸಲೀಲತೆಯನ್ನು ಸಾಧಿಸಿಕೊಳ್ಳುವಂತೆ, ಇನ್ನೊಂದು ವಿಧವಾಗಿಯೂ ಸಾಧಿಸುತ್ತಿದ್ದಾನೆ. ಅದೆಂದರೆ ಅವನ ವಾಕ್ಯಗಳ 'ಕೊನೆ'ಯ ಮುಖಾಂತರ ಸಲೀಲವಾಗಿ ಕಥೆಯನ್ನು ಹೇಳುತ್ತ ಹೊರಟಾಗ ಮುದ್ದಣನು ಅನೇಕ ಸಲ ತನ್ನ ವಾಕ್ಯಗಳನ್ನು ಮೂರು ಮೂರು ಪದಗಳ ಜೋಡಣೆಯಿಂದ (triplets) ಮುಗಿಸುವದುಂಟು. ಉದಾಹರಣೆಗೆ ಪುಟ ೪೩ ಮತ್ತು ೪೫ರಲ್ಲಿ ಬರುವ ಈ ಕೆಳಗಿನ ವಾಕ್ಯಗಳನ್ನು ನೋಡಬಹುದು.

"ಬಾಡಿ ಬಸವಳಿದ ಬಾಲೆ ಈಗಳ್ ಕಂಗೆಟ್ಟಳ್; ಎರ್ದೆಗುಂದಿದಳ್; ಬಾಯ್ವಿಟ್ಟಳ್" ಪುನಃ.

"( ಲಕ್ಷ್ಮಣಂ ) ಮನದೊಳೆ ಮಮ್ಮಲ ಮರುಗಿದಂ; ನೊಂದಂ; ಬೆಂದಂ."

ಇಂಥ ಪ್ರಯೋಗಗಳು ವಾಕ್ಯಕ್ಕೂ ಮತ್ತು ವಿಚಾರಕ್ಕೂ ಒಂದು ಪರಿಪೂರ್ಣತೆ ಇಲ್ಲವೆ ಮುಕ್ತಾಯದ ಫಲವನ್ನು ಕೊಡುವವುಂಟು.

ಇದರಂತೆ, ಗದ್ಯದ ಕಾವ್ಯರೀತಿಯೂ ಮುದ್ದಣನ ಶೈಲಿಯ ಒಂದು ಮಹತ್ವದ ಲಕ್ಷಣವಾಗಿದೆ. ಎಷ್ಟೋ ಸಲ ಮುದ್ದಣನ ವಾಕ್ಯಗಳು ಮಾತ್ರಾಗಣಬದ್ಧವಿದ್ದ ಹಾಗೆ ಕಾಣುತ್ತವೆ. ಇಂಥ ವಾಕ್ಯಗಳಲ್ಲಿ ಕಾವ್ಯದ "ಗತಿ"ಯನ್ನೇ ಗುರುತಿಸಬಹುದು. ಉದಾಹರಣೆಗೆ "ಪೆಱವರ ಕಿಡುದೆಸೆಯೊಳ್ ಕಡುಸಂತಸಕ್ಕೆ ಡೆಗುಡದಿರ್; ಸಗ್ಗಿಗರಾಣ್ಮನ ಘನಕರಿಘಟೆಗಳ್ ಬೇಸಗೆಯ ಬೀಸರಕ್ಕೆ ಬಸವಳಿದು...." ಮೊದಲಾದ ವಾಕ್ಯಗಳಲ್ಲಿ ಗದ್ಯಶೈಲಿ ಪದ್ಯಕ್ಕೆ ತಿರುಗುವದನ್ನು ಗಮನಿಸಬಹುದು. ಹೀಗೆ ಶೈಲಿಯು ಗದ್ಯರೂಪವಾಗಿ ಹೊರಟು ಮಧ್ಯೆ ಛಂದೋರೂಪಕ್ಕೆ ತಿರುಗಿ ವೃತ್ತಪಾದಗಳೂ, ಪಾದಭಾಗಗಳೂ ಆಗಿ [illegible] ಗದ್ಯಶೈಲಿಗೆ "ವೃತ್ತಗಂಧಿ" ಎನ್ನುವದುಂಟು.

ಇದರಂತೆ ಮುದ್ದಣನ ಶೈಲಿಯಲ್ಲಿ ಉಪಮಾ ಉತ್ಪ್ರೇಕ್ಷೆಗಳ ಸೊಗಸಿಗೂ, ಊಹೆಯ ಚಮತ್ಕೃತಿಗೂ ಎಡೆಯಿಲ್ಲದೆ ಇಲ್ಲ........ ಹಣ್ಣುಗಳಿಂದ ತುಂಬಿ ಬಾಗಿದ ರಸಬಾಳೆಯ ಗೊನೆಯು ಮುದ್ದಣನ ಕಣ್ಣಿಗೆ ಕಾಣುವುದು ಈ ರೀತಿ "ಪೆತ್ತಬ್ಬೆಗೆ ತಮ್ಮಂ ಅಱಿವಾಯ್ತೆಂದು ನಾಣ್ಚಿಬಾಗಿದುದಕ್ಕುಂ."

ರಾತ್ರಿಯಾಗಲು ಪದ್ಮಿನಿ ಬಾಡುವ ರೀತಿ ಇಂತು: "ಬಲ್ಗಾಲಂ ಬಿಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು, ಸವತಿಯೊಂದು ಪಿಸುಣ್ಗೆ ಎಱೆಯುಂ ಮಾಱುವೋದಂ ಎಂಬೊಂದು ಬೈಗದಿಂ ಕೊರಗಿದಳ್ ಎನೆ ಪದ್ಮಿನಿ ನಾಡೆ ಬಾಡೆ—"

ಇದೂ ಅಲ್ಲದೆ, ಬೇಸಗೆಯಲ್ಲಿ ನದಿಗಳು ಇಳಿಯುವುದೂ "ಪೊಸವೆಸಲಾದ ಪೆಣ್ಗಳ ಜವ್ವನದ ಬಿಗುರ್ಪಿಳಿದು ತಿಳಿವಂತೆ." ಗ್ರೀಷ್ಮಋತುವಿನಲ್ಲಿ ಸಾರಸಗಳು ಸರೋವರವನ್ನು ಬಿಡುವುದು "ಪುರುಳ್ಗುಂದಿದ ಆಣ್ಮನಂ ತೊಱೆದು ಪೋಪ ತುಳಿಲಾಳ್ಗಳಂ"ತೆ. ರಾತ್ರಿಯಲ್ಲಿ ಕೆಲಸ ಮಾಡುವ ಅಕ್ಕಸಾಲಿಗರ ಸುತ್ತಿಗೆಯ ಪೆಟ್ಟು ಬೀಳುವ ರೀತಿ "ಕೊಟ್ಟಂ ಕೆಟ್ಟಂ" ಎಂದು. ಹೀಗೆ ಇನ್ನೂ ಹತ್ತಾರು ಊಹಾವಿಲಾಸಗಳನ್ನು ಹೇಳಬಹುದು

ಮುದ್ದಣನ ಲೋಕೋಕ್ತಿಗಳು ಕೂಡ ಅಚ್ಚಕನ್ನಡದವಿದ್ದು ಅವುಗಳಲ್ಲಿ ಹಲವಾರನ್ನು ಈ ಮೊದಲೇ ನೋಡಿದ್ದೇವೆ. "ಊರೊಳ್ ಮಾರಿಯೆಂದು ಮನೆಪೊರಿಯುಂ ಮಾಱುಗುಡುವರೆ?" "ಕಾಱುಂಬನ ಕುತ್ತಕ್ಕೆ ಕಾಱಿಯ ಪಿತ್ತಮೆ ಮದ್ದಾಯ್ತು". "ನೀನೇವೂರ ರಾಯುಗುವರನೋ ?" "ರಕ್ಕಸಂ ಸೋಲ್ತು ಸುಣ್ಣದೊಳಾದಂ;" "ಇರುಳ್ ಕಂಡ ಬಾವಿಯೊಳ್ ಪಗಲ್ ಬಿಬ್ದಂತೆ;" "ತುಪ್ಪಳಂ ತೂಱು," "ಎಣ್ಣೆಸೀಗೆ;" "ತಱಿದು ಸುಂಟಿಗೆ ಪಂಟಿಗೆ ಸಲ್ವಿನಂ;" ಬೆನಕನಂ ಕಂಡು ಕಿತ್ತಿಲಿಗೆ ಕುಂಬಿಟ್ಟ;" "ಕೊಡಲಿಯ ಕಾವೆ ಕುಲಕ್ಕೆ ಕೇಡಾದುದು" ಇತ್ಯಾದಿ.

ಕೊನೆಯದಾಗಿ ಮುದ್ದಣನ ಶೈಲಿಯ ಇನ್ನೊಂದು ವೈಶಿಷ್ಟ್ಯವನ್ನು ಇಲ್ಲಿ ಗಮನಿಸಬೇಕು. ಮುದ್ದಣನು ಒಳ್ಳೇ ಅಭ್ಯಾಸಿಯೆಂದು ಈ ಮೊದಲೇ ಹೇಳಿದೆ. ಅವನನ್ನು ಪ್ರತ್ಯಕ್ಷ ಜೀವನದಲ್ಲಿ ಕಂಡ ಮಳಲಿ ಸುಬ್ಬರಾಯರಂಥ ಅನೇಕ ವ್ಯಕ್ತಿಗಳು ಮುದ್ದಣನು ಬಹುಶಃ ಎರಡು ಪುಸ್ತಕಗಳನ್ನು ಹೆಚ್ಚಾಗಿ ಓದುತ್ತಿದ್ದನೆಂದು ಹೇಳುತ್ತಾರೆ. ಒಂದು ಕಿಟೆಲ್‌ಕೋಶ; ಎರಡನೆಯದು ಕೇಶಿರಾಜನ ಶಬ್ದಮಣಿದರ್ಪಣ. ಮುದ್ದಣನ ಶೈಲಿಯ ದೃಷ್ಟಿಯಿಂದ ಈ

ಎರಡನೇ ಪುಸ್ತಕ ಬಹಳ ಮಹತ್ವದ್ದಿದೆ ಯಾಕಂದರೆ, ಇಡೀ ರಾಮಾಶ್ವಮೇಧವನ್ನು ಓದಿದಂತೆಲ್ಲ, ಮುದ್ದಣನು ಶಬ್ದಮಣಿದರ್ಪಣದ ಆದ್ರ್ರ ಅಭ್ಯಾಸಿಯಾಗಿದ್ದನೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ

ಮುದ್ದಣನ ಮೇಲಾದ ಈ ಶಬ್ದಮಣಿದರ್ಪಣದ ಪ್ರಭಾವವನ್ನು ಮೂರು ವಿಧವಾಗಿ ಗುರುತಿಸಬಹುದು:— ಒಂದು: ಮುದ್ದಣನ ಶಬ್ದಭಂಡಾರವು ಎಷ್ಟೋ ಮಟ್ಟಿಗೆ ಶಬ್ದಮಣಿದರ್ಪಣದಿಂದ ಬಂದಿದೆ. ಉಳಿದ ಕವಿಗಳಲ್ಲಿಯಕ್ಕಿಂತ ಮುದ್ದಣನಲ್ಲಿ ಕೇಶಿರಾಜನ ಶಬ್ದಗಳು ಹೆಚ್ಚು. ಅಷ್ಟೇ ಅಲ್ಲದೆ, ಕೇಶಿರಾಜನು ಹೇಳಿದ ಅನೇಕ ಅಪವಾದಗಳನ್ನು ಕೂಡ, ಮುದ್ದಣನು ಚಾಚೂ ಬಿಡದೆ ನಿಯಮಗಳ ಪ್ರಕಾರ ಉಪಯೋಗಿಸುತ್ತಾನೆ.

ಉದಾ: ಜಕ್ಕಂದೊಳಲಿ; ಎಳವೆ; ಬಳವಿ; ನೆಲಕಲ; ಧನ್ಯನೆಂ; ಕಾಣ್ಕೆ; ಎಮ್ಮಾತಶ್ವಪೊಱಆಡಿ— ಇತ್ಯಾದಿ ಹೇಳಬಹುದು

ಎರಡನೆಯದಾಗಿ, ಕೇಶಿರಾಜನು ಗ್ರಥಿಸಿದ ಹಲವು ಸೂತ್ರಗಳು ಮುದ್ದಣನಿಗಾಗಿಯೇ ಇದ್ದಂತೆ ಕಾಣುತ್ತವೆ. ಇಂಥ ಪ್ರಯೋಗಗಳನ್ನು ಇತರ ಕವಿಗಳಾರೂ ಇಷ್ಟರ ಮಟ್ಟಿಗೆ ಉಪಯೋಗಿಸಿರಲಿಕ್ಕಿಲ್ಲ. ಈ ಸೂತ್ರವೃತ್ತಿಕೆಗೆ ಪ್ರಾಣಪ್ರತಿಷ್ಠೆ ಮಾಡಿದ ಶ್ರೇಯಸ್ಸು ಮುದ್ದಣನಿಗೇ ಸಲ್ಲಬೇಕು

ಉದಾಹರಣೆಗೆ, ಕೇಶಿರಾಜನು ಕರ್ಮಧಾರಯ ಸಮಾಸದ ವಿಷಯವಾಗಿ ಹೇಳುವಾಗ ೧೭೦ನೇ ಸೂತ್ರದಲ್ಲಿ ನಡುವೆ ಬಿಂದು ಸೇರಿಕೊಳ್ಳುವದನ್ನು ಹೇಳುತ್ತಾನೆ. ಕೇಶಿರಾಜನು ಈ ಸಂದರ್ಭದಲ್ಲಿ ಹೇಳಿದ ಅನೇಕ ಪ್ರಯೋಗಗಳನ್ನು ಮುದ್ದಣನು ಉಪಯೋಗಿಸಿದ್ದಾನಲ್ಲದೆ, ಇಂಥ ಹೇರಳವಾದ ಪ್ರಯೋಗಗಳನ್ನು ಸ್ವತಃ ಸಿದ್ಧಿಸಿಕೊಂಡಿದ್ದಾನೆ ಇಂಥ ಶಬ್ದಗಳ ಬಗ್ಗೆ ಅವನಿಗೆ ಮಮತೆ ಬಹಳ ಈ ರೀತಿ ಪದ ಸೃಷ್ಟಿಮಾಡಿಕೊಳ್ಳುವದೇನೂ ಸಾಮಾನ್ಯವಾದ ಲೇಖನಸಿದ್ಧಿಯಲ್ಲ. ಈ ರೀತಿಯಾಗಿ ಮುದ್ದಣನಲ್ಲಿ ಎಱುಂಜಸ, ಪಾಱುಂಬಳೆ, ತುಂಬುಂಜವ್ವನ, ತುಳುಕುಂಬನಿ ಮೊದಲಾದ ಪ್ರಯೋಗಗಳನ್ನು ಕಾಣಬಹುದು.

ಕೊನೆಯದಾಗಿ, ಅನೇಕ ಸಲ ಮುದ್ದಣನು ಕೇಶಿರಾಜನು ಹೇಳಿದ ಪ್ರಯೋಗ ವಾಕ್ಯಗಳನ್ನು ತದ್ವತ್ತಾಗಿಯಾಗಲಿ, ಇಲ್ಲವೆ ಸ್ವಲ್ಪ ಮಾರ್ಪಡಿಸಿಕೊಂಡಾಗಲಿ ಉಪಯೋಗಿಸಿದ್ದುಂಟು.

ಕೇಶಿರಾಜನಲ್ಲಿ "ಏನೆಂಬ ಪೆಂಪೋ" ಎಂದು ಪ್ರಯೋಗ ವಾಕ್ಯವಿದ್ದರೆ ಮುದ್ದಣನಲ್ಲಿ "ಏನೆಂಬ ಕುರ್ವೆಯೋ" ಎಂದು ಮೊದಲಾಗಿ ಹತ್ತಾರು ವಾಕ್ಯಗಳನ್ನು ಕಾಣಬಹುದು. ಅದರಂತೆಯೇ ಕೇಶಿರಾಜನ "ಪ್ರಾಯಂ ಕೂಸಾದೊಡೆ ಅಭಿಪ್ರಾಯಂ ಕೂಸಕ್ಕುಮೆ?" ಎನ್ನುವ ವಾಕ್ಯಕ್ಕೆ ಪ್ರತಿಯಾಗಿ, ಮುದ್ದಣನಲ್ಲಿ "ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ?" ಎಂದಿದೆ. ಇದರಂತೆಯೇ "ಹಾ ರಾಮಾ ಎಂದು ಸೀತೆ ಬಾಯಳಿದಳ್ತಳ್", "ಬೇಡ ಗಡಾ ನಿನಗೆ ಮುನಿಸು" ಮೊದಲಾದ ವಾಕ್ಯಗಳಲ್ಲೂ ಕೇಶಿರಾಜನ ಧ್ವನಿಯನ್ನು ಗುರುತಿಸಬಹುದು.

ಇದರಿಂದ ಮುದ್ದಣನು ಕೇಶಿರಾಜನ ಕೇವಲ ಛಾಯಾನುವರ್ತಿಯೆಂದು ಅಭಿಪ್ರಾಯವಲ್ಲ; ಆದರೆ ಕವಿಯಾದ ಮುದ್ದಣನು ವ್ಯಾಕರಣದಂಥ ಶಾಸ್ತ್ರವನ್ನು ಕೂಡ ಎಷ್ಟು ಆರ್ದ್ರಹೃದಯದಿಂದ ಅಭ್ಯಾಸಮಾಡಿದ್ದನೆಂಬುದಕ್ಕೆ.

ಹೀಗಾಗಿ ಮುದ್ದಣನು ತಾನು ಹೊತ್ತ ಪ್ರತಿಜ್ಞೆಯನ್ನು ಬಹುಮಟ್ಟಿಗೆ ಸಾಧಿಸಿದ್ದಾನಲ್ಲದೆ, ತನ್ನ ರಸಿಕತೆ, ಶೃಂಗಾರ, ಬುದ್ಧಿಮತ್ತೆ, ಊಹಾವಿಲಾಸ, ದೇಸಿ-ಲೋಕೋಕ್ತಿ, ಪದ್ಯಮಯ ಶೈಲಿ ಮತ್ತು ಅಭ್ಯಾಸಗಳ ಮೂಲಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಶೀರ ಗೌರವದ ಸ್ಥಾನವನ್ನು ಪಡೆದಿದ್ದಾನೆ. ಅವನೇ ಹೇಳಿದಂತೆ ಅವನ ಕಾವ್ಯವನ್ನು ಓದಿ ಮನದ ಬಯಕೆ ಅಳಿದು ಅವನು "ನುಡಿದುದೆ ಪುರುಳ್" "ಪಿಡಿದುದೆ ತಿರುಳ್" ಎನ್ನುವ ಹಾಗೆ ಕಥೆಯನ್ನು ಸಾಗಿಸಿಕೊಂಡು ಹೋಗಿದ್ದಾನೆ.

---

# ಮುದ್ದಣನ "ಸೀತಾಪರಿತ್ಯಾಗದ" ಕಥೆ

ಇಡೀ ರಾಮಾಯಣ ಕಾವ್ಯದಲ್ಲಿ ಉತ್ತರ ಕಾಂಡದಲ್ಲಿ ಬರುವ ಶ್ರೀರಾಮಚಂದ್ರನ ವರ್ತನೆಯು ಅನೇಕ ತರದ ವಿಮರ್ಶೆಗೆ ಎಡೆಯಾಗಿದೆ. ಇದರ ಕಾರಣವೆಂದರೆ "ಸೀತಾಪರಿತ್ಯಾಗ"ದ ಭಾಗವೆ ಶ್ರೀರಾಮಚಂದ್ರನು ತಾಯಿ ಸೀತಾದೇವಿಯನ್ನು ಬಿಡುವಲ್ಲಿ ಎಷ್ಟರಮಟ್ಟಿಗೆ ಸರಿಯಾದ ಕೆಲಸ ವನ್ನು ಮಾಡಿದನೆಂಬುದನ್ನು ಅನೇಕರು ಪ್ರಶ್ನಿಸಿದ್ದಾರೆ. ಹಲವರ ಅಭಿಪ್ರಾಯದ ಪ್ರಕಾರ ಶ್ರೀರಾಮಚಂದ್ರನು ವೈಯಕ್ತಿಕ ಪ್ರೀತಿ ಮತ್ತು ನಿಷ್ಠುರ ಕರ್ತವ್ಯಗಳ ದ್ವಂದ್ವದ ಪ್ರತೀಕದಂತಿದ್ದು, ಕರ್ತವ್ಯಪರಿಪಾಲನೆಯ ಆದರ್ಶನಾಗಿದ್ದಾನೆಂದರೆ, ಮತ್ತೆ ಕೆಲವರ ಪ್ರಕಾರ ಆದರ್ಶ ಗೃಹಿಣಿಯಾಗಿ, ಲೋಕಮಾತೆಯಾಗಿದ್ದ ಪಾವನೆ ಸೀತಾದೇವಿಯನ್ನು ತೀರ ನಿಷ್ಕರುಣವಾಗಿ ಬಿಡುವಲ್ಲಿ ರಾಮಚಂದ್ರನು ತನ್ನ ಹೃದಯದ ಕಾರ್ಪಣ್ಯವನ್ನೂ ಮತ್ತು ಕರ್ತವ್ಯಪರಿಪಾಲನೆಯ ತಪ್ಪು ದೃಷ್ಟಿಯನ್ನೂ ತೋರಿಸಿದ್ದಾನೆಂದೂ ಮತ. "ರಾಜಾ ಕಾಲಸ್ಯ ಕಾರಣಮ್" ಎಂದಿರುವಾಗ, ಎಂಥ ವೈಯಕ್ತಿಕ ಪ್ರೀತಿ ಆವೇಷಗಳೂ ಶ್ರೀರಾಮಚಂದ್ರನನ್ನು ತಡೆಗಟ್ಟಬಾರದೆಂದು ಮೊದಲನೆಯ ಪಂಥದವರು ಪ್ರತಿಪಾದಿಸಿದರೆ, ಎರಡನೆಯ ಪಂಥದವರ ಪ್ರಕಾರ, ಈ ಸಮಗ್ರಘಟನೆ, ರಾಮಚಂದ್ರನ ಕಾರ್ಯ, ಹೆದರುಗುಳಿತನ, ಮೋಸ, ಮತ್ತು ಸರ್ವಾಧಿಕಾರಿತ್ವದ ಲಾಲಸೆಯನ್ನು ತೋರಿಸುತ್ತವೆ. ಇದರ ಪ್ರಕಾರ ಈ ವರೆಗೆ ಅಸಾಮಾನ್ಯ ವ್ಯಕ್ತಿಯಾಗಿ, ಸವರ್ಣ ವಿಗ್ರಹವಾಗಿ ಮೆರೆದ ಶ್ರೀರಾಮಚಂದ್ರನ "ಮಣ್ಣಿನ ಕಾಲುಗಳನು" ಈ ಸೀತಾಪರಿತ್ಯಾಗದ ಘಟನೆಯಲ್ಲಿ ನೋಡಬಹುದು. ಸೀತಾಪರಿತ್ಯಾಗದ ಭಾಗದಲ್ಲಿ ಈ ಕಿಟ್ಟದ ಗೊಂಬೆಯ ಮೇಲಿನ ಬಣ್ಣಹಾರಿದ್ದು, ಅದರ ಹೊಲಸು ಮಣ್ಣುಮೈಯನ್ನು ಕಾಣಬಹುದು.

ಹೀಗಾಗಿ ರಾಮಚರಿತೆಯಲ್ಲಿಯ ಈ ಕಥಾ ಭಾಗವುಯಾವನೇ ಕವಿಯ ಕಾವ್ಯಪ್ರತಿಭೆಯ ಒರೆಗಲ್ಲಿನಂತಿದೆ. ಇಡೀ ರಾಮಚರಿತೆಯಲ್ಲಿ

ಸೀತಾಪರಿತ್ಯಾಗದ ಭಾಗವು ಒಂದು ಮಹತ್ತರವಾದ ಶಿವಧನುಸ್ಸು ಇದ್ದ ಹಾಗೆ. ಈ ಮಹಾ-ಧನುವನ್ನು ಎತ್ತುವಲ್ಲಿ ಎಂಥೆಂಥ ಪ್ರತಿಭಾವಂತ ಕವಿಗಳೂ ಕಾಲೂರಿದ್ದುಂಟು. ಉತ್ತರಕಾಂಡವ ಮೊದಲು ಬರುವ ಶ್ರೀರಾಮಚಂದ್ರನ ಔನ್ನತ್ಯಕ್ಕೆ ಅನುಗುಣವಾಗಿ ಮುಂದಿನ ಈ ಕಥೆಯನ್ನೂ ಸಮನ್ವಯಿಸಿ ಹೇಳುವ ಪ್ರತಿಭಾವಂತ ಕವಿಗೆ ಇಂದಿಗೂ ನಿಜವಾಗಿ ಸಾಹಿತ್ಯ ಪ್ರಪಂಚದಲ್ಲಿ ಸ್ಥಾನವಿದೆ. ಇದನ್ನರಿತೇ ಅನೇಕ ವಿಮರ್ಶಕರು ವಾಲ್ಮೀಕಿ ರಾಮಾಯಣದ ಉತ್ತರಕಾಂಡದಲ್ಲಿ ಬರುವ ಈ ಕಥೆಯು ವಾಲ್ಮೀಕಿ ಕೃತವಲ್ಲವೆಂದೂ, ಪ್ರಕ್ಷಿಪ್ತವೆಂದೂ ಹೇಳುತ್ತಾರೆ. ಅವರಂತೆಯೇ. ಈಕಡೆಗೆ ಅನೇಕ ಸಂಸ್ಕೃತ ಮತ್ತು ಕನ್ನಡ ಕವಿಗಳು ಹೇಗಾದರೂ ಈ ಶಿವಧನುಸ್ಸನ್ನು ಎತ್ತಲು ಹವಣಿಸಿದ್ದಾರೆ.

ಹಾಗಾದರೆ, ಇಂಥ ಮಹತ್ತರವಾದ ಪಾತ್ರವನ್ನು ಶೇಷರಾಮಾಯಣಕ್ಕೆ ಅನುಸಾರವಾಗಿ ನಮ್ಮ ಮುದ್ದಣ ಕವಿಯು ಯಾವ ರೀತಿ ಚಿತ್ರಿಸಿದ್ದಾನೆಂಬುದನ್ನೂ ಮತ್ತು ಕೊನೆಗೆ ನಮ್ಮಲ್ಲಿ ಯಾವ ಭಾವನೆ ಉಳಿಯುವದೆಂಬುದನ್ನೂ ನೋಡೋಣ.

ಮುದ್ದಣನು ಚಿತ್ರಿಸಿದ ಶ್ರೀರಾಮಚಂದ್ರನ ಚಿತ್ರವನ್ನು ನೋಡಿ ನಮ್ಮ ಮನಸ್ಸಿಗೆ ಸಮಾಧಾನವಾಗುವದಿಲ್ಲವೆಂದೇ ಹೇಳಬೇಕು. ಯಾಕಂದರೆ ಈ ಚಿತ್ರಣದಲ್ಲಿ ವಾಲ್ಮೀಕಿ ರಾಮಾಯಣದಲ್ಲಿರುವಷ್ಟು ಕೂಡ ಶ್ರೇಯಸ್ಸು ಕಂಡುಬಾರದು. ಈ ದೃಷ್ಟಿಯಿಂದ ಲಕ್ಷ್ಮೀಶನ ರಾಮಚಂದ್ರ ಎಷ್ಟೋ ಪಾಲಿಗೆ ಬೇಕು. ಅವನ ನಡೆವಳಿಕೆಯಲ್ಲಿ ಹೆಚ್ಚು ಬುದ್ಧಿಮತ್ತೆಯೂ ಮತ್ತು ವಿಚಾರಶಕ್ತಿಯೂ ಇವೆ.

ವಾಲ್ಮೀಕಿ ರಾಮಾಯಣದಲ್ಲಿ ಈ ಕಥಾಭಾಗವು ಉತ್ತರಕಾಂಡದ ಸರ್ಗಗಳಲ್ಲಿ ಬರುತ್ತದೆ. ಅಲ್ಲಿಯೂ ಮತ್ತು ಇಲ್ಲೂ ಬರುವ ಸ್ಥೂಲ ವ್ಯತ್ಯಾಸಗಳನ್ನು ಕಾವ್ಯಪ್ರತಿಭೆಯ ದೃಷ್ಟಿಯಿಂದ ಗಮನಿಸಬಹುದು.

(೧) ವಾಲ್ಮೀಕಿ ರಾಮಾಯಣದಲ್ಲಿ ರಾಮಚಂದ್ರನ ಕನಸಿನ ವಿಷಯವಾಗಲೀ, ಅದಕ್ಕೆ "ಎನೆ ಕನಸಿತೊಳ್ಳಿತ್ತೆಂದದಕೆ ಮುನಿವರ ವಸಿಷ್ಠೆ ಶಾಂತಿಯಂ" ನೆಗಳ್ಚುವ ಸಂದರ್ಭವಾಗಲಿ ಬರುವದಿಲ್ಲ.

(೨) ಅಷ್ಟೇ ಅಲ್ಲದೆ, ಅಲ್ಲಿ ಏನೋ ಹಿಂದು ಮುಂದು ನೋಡು ತ್ತಿರುವ ಹೆದರುಗುಳಿಯು ಹಾಗೆ ಶ್ರೀರಾಮಚಂದ್ರನು ಈ ಸಂದರ್ಭದಲ್ಲಿ ಮಾತ್ರ ಚಾರರನ್ನು ಕರೆದು ಕೇಳುವ ಪ್ರಶ್ನೆಯಿಲ್ಲ.

ಅಲ್ಲಿ ಬರುವ ಪ್ರಕಾರ ಇಂಥ ಒಂದು ಸಭೆಯಲ್ಲಿ ರಾಮಚಂದ್ರನ ಎದುರು ಅನೇಕ ವಿಚಕ್ಷಣರು ರಾಜ್ಯದಲ್ಲಿ ನಡೆದ ಘಟನೆಗಳನ್ನು ವಿವರಿಸು ವಾಗ ಈ ಮಾತನ್ನೂ ಹೇಳುತ್ತಾರೆ:

> ತತ್ರೋಪವಿಷ್ಟಂ ರಾಜಾನಂ ಉಪಾಸಂತೇ ವಿಚಕ್ಷಣಾಃ
> ಕಥಾನಾಂ ಬಹುರೂಪಾಣಾಂ ಹಾಸ್ಯಕಾರಾಃ ಸಮಂತತಃ...
> ಏತೇ ಕಥಾಃ ಬಹುವಿಧಾಃ ಪರಿಹಾಸಸಮನ್ವಿತಾಃ
> ಕಥಯಂತಿ ಸ್ಮ ಸಂಹೃಷ್ಟಾಃ ರಾಘವಸ್ಯ ಮಹಾತ್ಮನಃ
> ತತಃ ಕಥಾಯಾಂ ಕಸ್ಯಾಂಚಿದ್ ರಾಘವಃ ಸಮಭಾಷತ
> "ಕಾಃ ಕಥಾಃ ನಗರೇ ಭದ್ರ, ವರ್ತಂತೇ ವಿಷಯೇಷು ಚ,
> ಮಾಮ್ ಆಶ್ರಿತಾನಿ ಕಾನ್ಯಾಹುಃ ಪೌರಜನಪದಾಃ ಜನಾಃ?"

ಎಂದು ಕೇಳುತ್ತಾನೆ.

(೩) ಆಗ ಉಳಿದಕಡೆಯ ಹಾಗೆ, ಇಲ್ಲಿ ಕೇವಲ ರಜಕನೊಬ್ಬನ ಮಾತು ಮಾತ್ರ ಬರುವದಿಲ್ಲ. ಇದರಿಂದ ಇಂಥ ಸುದ್ದಿ ಇಷ್ಟು ಹಬ್ಬುವ ವರೆಗೆ ರಾಮಚಂದ್ರನು ಸುಮ್ಮನಿದ್ದನೇ ಎಂಬ ಆಪಾದನೆ ತಪ್ಪಿದರೂ, ಯಾವನೋ ಒಬ್ಬ ಹಾಳು ರಜಕನ ಗುರುತ್ವವನ್ನು ಒಪ್ಪಿಕೊಳ್ಳುವ ದುರ್ಧರ ಪ್ರಸಂಗವಾದರೂ ತಪ್ಪುತ್ತದೆ. ಯಾಕಂದರೆ ಜನಪದದ ಜನರು ರಾಮ ಚಂದ್ರನ ಅನೇಕ ಶೌರ್ಯದ ಕೃತಿಗಳನ್ನು ಶ್ಲಾಘಿಸಿದರೂ, ಒಂದರ ಬಗ್ಗೆ ಮಾತ್ರ ಸಾಶಂಕರಾಗಿದ್ದಾರೆ. ಅದೆಂದರೆ:—

> "ಕೀದೃಶಂ ಹೃದಯೇ ತಸ್ಯ ಸೀತಾಸಂಭೋಗಜಂ ಸುಖಮ್
> ಅಂಕಮ್ ಆರೋಪ್ಯತು ಪುರಾ ರಾವಣೇನ ಬಲಾದ್ಧೃತಾಮ್
> ಲಂಕಾಮ್ ಅಪಿ ಪುರಾ ನೀತಾಂ ಅಶೋಕವನಿಕಾಂ ಗತಾಮ್
> ರಕ್ಷಸಾಂ ವಶಮಾಪನ್ನಾಂ ಕಥಂ ರಾಮೋನ್ನಕುತ್ಸ್ಯತಿ?"—ಎಂದು.

ಅಷ್ಟೇ ಅಲ್ಲ; ಪ್ರಜಾಪರಿಪಾಲಕನಾದ ಧರ್ಮಜ್ಞನಾದ ಅರಸೇ ಹೀಗೆ ಮಾಡುತ್ತಿರುವಾಗ ಇತರರೂ ಅವನನ್ನು ಅನುಕರಿಸಿದರೆ ತಪ್ಪೇನು? ಎನ್ನುವ ಭಾವನೆ ರೂಢವಾಗುತ್ತಿರುತ್ತದೆ:

> "ಅಸ್ಮಾಕಮ್ ಅಪಿ ದಾರೇಷು ಸಹನೀಯಂ ಭವಿಷ್ಯತಿ;
> ಯಥಾ ಹಿ ಕುರುತೇ ರಾಜಾ ಪ್ರಜಾಃ ತಮ್ ಅನುವರ್ತತೇ

ಏವಂ ಬಹುವಿಧಾಃ ಬ್ರಶಾಃ ವದಂತಿ ಪುರವ ಸಿನಃ
ನಗರೇಷು ಚ ಸರ್ವೇಷು ರಾಜನ್, ಜನಪದೇಷು ಚ"

ಎಂದು ಹೇಳುತ್ತಾರೆ. ಹೀಗೆ ಹತ್ತಾರು ಮೆದುಳಿಗೆ ಈ ಅಭಿಪ್ರಾಯ ಬಂದಾಗ, ರಾಮಚಂದ್ರನು ಪರಿತ್ಯಾಗಕ್ಕಾಗಿ ಮನಸ್ಸು ಮಾಡುವುದು ಹೆಚ್ಚು ಸ್ವೈಜವಾಗುತ್ತದೆ.

(೪) ಅದೂ ಅಲ್ಲದೆ, ಈ ಪರಿತ್ಯಾಗದ ವಿಷಯದಲ್ಲಿ ಸ್ವತಃ ರಾಮಚಂದ್ರನೇ ತನ್ನ ತಮ್ಮಂದಿರನ್ನು ಕರೆದು ಅವರ ಅಭಿಪ್ರಾಯವನ್ನು ಕೇಳುತ್ತಾನೆ.... ಮತ್ತು ಅವರ ಬಗ್ಗೆ ಅವನಿಗೆ ಒಳ್ಳೆಯ ಅಭಿಪ್ರಾಯವೂ ಇದೆ. "ಶೀಘ್ರಮ್ ಆನಯ ಸೌಮಿತ್ರಿಂ ಲಕ್ಷ್ಮಣಂ ಶುಭಲಕ್ಷ್ಮಣಾ" ಎಂದು ಹೇಳಿ, ತಮ್ಮಂದಿರಿಗೆ ಈ ರೀತಿ ಹೇಳುತ್ತಾನೆ:

"ಭವಂತೋ ಮಮ ಸರ್ವಸ್ವಂ ಭವಂತೋ ಜೀವಿತಂ ಮಮ;
ಭವದ್ಭಿಃ ಚ ಕೃತಂ ರಾಜ್ಯಂ ಪಾಲಯಾಮಿ ನರೇಶ್ವರಾಃ,
ಭವಂತಃ ಕೃತಶಾಸ್ತ್ರಾರ್ಥಾಃ ಬುದ್ಧ್ಯಾ ಚ ಪರಿನಿಷ್ಠಿತಾ.
ಸಂಭೂಯ ಚ ಮದರ್ಥೋಽಯಂ ಅನ್ವೇಷ್ಟವ್ಯೋ ನರೇಶ್ವರಾಃ

ಆಗ ಶ್ರೀರಾಮಚಂದ್ರನು ಕಾಣುವ ರೀತಿಯನ್ನು ನೋಡಿರಿ;

"ಅವಾಙ್ಮುಖೋ ದೀನಮನಾಃ"; "ಸಗ್ರಹಂ ಶಶಿನಂ ಯಥಾ",
"ಸಂಧ್ಯಾಗತಮ್ ಇವ ಆದಿತ್ಯಮ್ ಪ್ರಭಯಾ ಪರಿವರ್ಜಿತಮ್"...
ಹತ ಶೋಭಂ ಯಥಾಪದ್ಮಂ ಮುಖಂ ವೀಕ್ಷ್ಯ ಚ ತಸ್ಯ ತೇ"

(೫) ಮತ್ತು ಅವನು ಸೀತಾದೇವಿಯನ್ನು ಬಿಡುವ ಕಾರಣವನ್ನೂ ಅವಳ ಪಾತಿವ್ರತ್ಯದ ಅರಿವು ಇದ್ದದನ್ನೂ ನೋಡಿರಿ:—

"ಅಹಂ ಕಿಲ ಕುಲೇ ಜಾತ ಇಕ್ಷ್ವಾಕೂಣಾಂ ಮಹಾತ್ಮನಾಂ
ಸೀತಾಪಿ ಸತ್ಕುಲೇ ಜಾತಾ ಜನಕಾನಾಂ ಮಹಾತ್ಮನಾಂ...
ಪ್ರತ್ಯಯಾರ್ಥಂ ತತಃ ಸೀತಾ ವಿವೇಶ ಜ್ವಲನಂ ತದಾ
ಪ್ರತ್ಯಕ್ಷಂ ತವ ಸೌಮಿತ್ರೇ ದೇವಾನಾಂ ಹವ್ಯವಾಹನಃ...
ಅಂತರಾತ್ಮಾ ಚ ಮೇ ವೇತ್ತಿ ಸೀತಾಂ ಶುದ್ಧಾಂ ಯಶಸ್ವಿನೀಂ"

ಆದ್ದರಿಂದ,

"ಪತತಿ ಏವ ಅಧಮಾತ್ ಲೋಕಾತ್ ಯಾವತ್‌ಶಬ್ದಃ ಪ್ರಕೀರ್ತ್ಯತೇ
ಅಕೀರ್ತಿಃ ನಿಂದ್ಯತೇ ದೇವೈಃ ಕೀರ್ತಿಃ ಲೋಕೇಷುಪೂಜ್ಯತೇ"

(೬.) ಅಷ್ಟೇ ಅಲ್ಲದೆ, ಸೀತಾದೇವಿಯನ್ನು ಬಿಡುವಲ್ಲಿಯೂ "ನೆಪದ" ಪ್ರಶ್ನೆ ಇಲ್ಲ.

"ಆರುಹ್ಯ ಸೀತಾಮ್ ಆರೋಪ್ಯ ವಿಷಯಾಂತೇ ಸಮುತ್ಸೃಜ"

ಇಷ್ಟೇ ದುರ್ದೈವ !

"ಪೂರ್ವಮ್ ಉಕ್ತೋಹಂ ಅನಯಾ ಗಂಗಾತೀರೇ ಅಹಮ್
ಆಶ್ರಮಾನ್ ಪಶ್ಯೇಮ ಇತಿ; ತಸ್ಯಾಃ ಚ ಕಾಮಃ ಸಂವರ್ತ್ಯತಾಮ್
ಅಯಮ್"

(೭) ಈ ಮಾತನ್ನು ಕೇಳಿದ ಸೀತಾದೇವಿಯೂ ಕೂಡ ತನ್ನ ಪತಿ ಭಕ್ತಿಯನ್ನು ಈ ರೀತಿ ತೋರಿ,

"ಅಶುಭಾನಿ ಬಹೂನ್ಯೇವ ಪಶ್ಯಾಮಿ ರಘುನಂದನ,...
ಅಪಿ ಸ್ವಸ್ತಿ ಭವೇತ್ತಸ್ಯ ಭ್ರಾತುಃ ತೇ ಭ್ರಾತೃವತ್ಸಲ"

ಅದೇ ಕರ್ತವ್ಯದ ದೃಷ್ಟಿಯಿಂದಲೇ ಇದಕ್ಕಾಗಿ ಸಿದ್ಧಳಾಗಿದ್ದಾಳೆ.

"ಯತ್ತು ಪೌರಜನೇ ರಾಜನ್ ಧರ್ಮೇಣ ಸಮವಾಪ್ನುಯಾತ್,
ಅಹಂ ತು ನ ಅನುಶೋಚಾಮಿ ಸ್ವಶರೀರಂ ನರರ್ಷಭ,
ಯಥಾ ಸ ವಾದಃ ಪೌರಾಣಾಂ ತಥೈವ ರಘುನಂದನ,
ಪತಿರ್ಹಿ ದೇವತಾ ನಾರ್ಯಾಃ; ಪತಿರ್ಬಂಧುಃ ಪತಿರ್ಗುರುಃ
ಪ್ರಾಣೈರಪಿ ಪ್ರಿಯಂ ತಸ್ಮಾತ್ ಭರ್ತುಃ ಕಾರ್ಯಂ ವಿಶೇಷತಃ
ಇತಿ ಮದ್ವಚನಾತ್ ರಾಮೋ ವಕ್ತವ್ಯೋ ಮಮ ಸಂಗ್ರಹಃ"

(೮) ಅವಳಿಗೆ ಲಕ್ಷ್ಮಣನ ದುಗುಡದ ನಡೆವಳಿಕೆಯನ್ನು ನೋಡಿ ಹೀಗೆನಿಸುತ್ತದೆ; "ಜಾಹ್ನವೀತೀರಮಾಸಾದ್ಯ ಚಿರಾಭಿಲಾಷಿತಂ ಮಮ, ಹರ್ಷಕಾಲೇ ಕಿಮರ್ಥಂ ಮಾಂ ವಿಷಾದಯಸಿ ಲಕ್ಷ್ಮಣ?"

(೯) ವಾಲ್ಮೀಕಿ ಮಹರ್ಷಿಗಳೂ ಕೂಡ ತಮ್ಮ ಜ್ಞಾನಚಕ್ಷುವಿನಿಂದ ಅವಳನ್ನು "ಅಪಾಪಳೆಂದೂ ಪತಿವ್ರತೆಯೆಂದೂ" ತಿಳಿದಿರುತ್ತಾರೆ. ಮತ್ತು ತಮ್ಮ ಆಶ್ರಮವಾಸಿಗಳಿಗೆ ಜನಕತನಯೆಯಾಗಿ, ದಶರಥನ ಸೊಸೆಯಾಗಿ, ಶ್ರೀರಾಮಚಂದ್ರನ ಹೆಂಡತಿಯಾದ ರಾಜ್ಞಿ, ಸೀತಾದೇವಿಯನ್ನು ಪ್ರೀತಿಯಿಂದ ನೋಡಬೇಕೆಂದು ಆಜ್ಞಾಪಿಸುತ್ತಾರೆ.

"ಇಮಾಂ ಭವಂತಃ ಪಶ್ಯಂತು ಸ್ನೇಹೇನ ಪರಮೇಣ ಹಿ"

ಹೀಗಾಗಿ ಈ ಕಥೆಯಲ್ಲಿ ಋಜುತ್ವ ಸರ್ವತ್ರ ಎದ್ದು ಕಾಣುಬರು ವದನ್ನು ಗಮನಿಸಬೇಕು.

ಯಥಾಪ್ರಕಾರ ಮುದ್ದಣನ ಶ್ರೀರಾಮಚಂದ್ರನು ಲೋಕದ ಜನರು ತನ್ನ ಬಗ್ಗೆ ಯಾವ ಕಲ್ಪನೆಯನ್ನು ಮಾಡಿಕೊಂಡಿದ್ದಾರೆಂಬುವನ್ನು ತಿಳಿದು

ಕೊಳ್ಳಲು ತನ್ನ ದೂತರನ್ನು ಕೇಳುತ್ತಾನೆ ಆಗ ದೂತರು ರಜಕನ ಪ್ರಸ್ತಾಪವನ್ನೆತ್ತಲು, ಶ್ರೀರಾಮಚಂದ್ರನು ಗದರಿಸಿ ಅವರಿಗೆ ಉತ್ತರವನ್ನು ಹೇಳಲು ಕೇಳುತ್ತಾನೆ. ಆಗ ಅವರು ಒಬ್ಬ ಓಣಿಯ ಅಗಸನು "ಅಗಲ್ದ ಮಡದಿಯಂ ರಘುಜನಂತಿರೆ ಕೊಂಡಾಳೆವ್; ಬಾಳೆವ್" ಎಂದು ಬಿರುನುಡಿದನಾಗಿ ಹೇಳುತ್ತಾರೆ. ಆಗ ಶ್ರೀರಾಮಚಂದ್ರನು ಇದರ ಸತ್ಯಾಸತ್ಯತೆಯನ್ನು ಕೂಡ ವಿಚಾರಿಸಹೋಗದೆ, ಆ ರಜಕನ ಪರುಷೋಕ್ತಿಗೆ ಮನಗೆಟ್ಟು ಲೋಕಮಾತೆಯನ್ನು ನಿಂದಿಸಲು ಪ್ರಾರಂಭಿಸುತ್ತಾನೆ: "ಹಾ! ಪೊಂಜುರಿಗೆಯೆಂದೇ ಎರ್ದೆಗೊತ್ತಿದೆವ್; ಇಂತು ಕರುಳಂ ಕೊರೆಗುಮ್ ಎಂದು ಅರಿದೆನಿಲ್ಲಕ್ಕಟಾ! ಪಾವನೆಯೆಂದೇ ಒಪ್ಪುಗೊಂಡೆಮ್; ಅದರಿಂದ ಈ ವಿಲಗಮ್ ಒಂದಕ್ಕೆ ತಲೆಮುಟ್ಟಿವೆವ್" ಎಂದು ಉದ್ಗಾರತೆಗೆಯುತ್ತಾನೆ ತಾಯಿ ಸೀತಾದೇವಿಯು ಸುಖದುಃಖವೆನ್ನದೆ, ಚಳಿಬಿಸಿಲೆನ್ನದೆ ಶ್ರೀರಾಮಚಂದ್ರನ ದೇಹದ ನೆರಳಾಗಿ, ಜೀವದ ಜೀವವಾಗಿ ಹದಿನಾಲ್ಕು ವರುಷ ಬನ್ನದ ಕೂಳುಂಡು ಪರಿತಪಿಸಿದ್ದಕ್ಕೆ ಇದೇ ಮರ್ಯಾದೆಯೋ—? ರಜಕನೇನೋ ಗಳಹಬಹುದು. ಗಳಹುವ ಬಾಯನ್ನು ಯಾರೂ ತಡೆಯಲಾರರು. ಆದರೆ ಈ ಬಗ್ಗೆ ಶ್ರೀರಾಮಚಂದ್ರನಿಗಾದರೂ ಆತ್ಮವಿಶ್ವಾಸವಿರಬೇಕಷ್ಟೇ? ಅವನೂ ನಾಡಾಡಿಯ ಹಾಗೆ ಅವಳ ಚಾರಿತ್ರ್ಯವನ್ನು ಶಂಕಿಸುತ್ತ ನಡೆದರೆ?.... ಇದಕ್ಕೆ ಕೊನೆಯಲ್ಲಿ—? ಪಾವನೆ ಸೀತಾದೇವಿ ಬರಿಯ ಹೂವಿನ ಮೇಲೆ ಹಾರುವ ಪತಂಗವೇ? ಬರಿಯ ಬಣ್ಣದ ಗೊಂಬೆಯೇ?— "ಪೊಂಜುರಿಗೆ"!

ಇಲ್ಲಿಗೇ ಶ್ರೀರಾಮಚಂದ್ರನ ಕ್ಷುದ್ರ ಮನಸ್ಸು ನಿಲ್ಲುವದಿಲ್ಲ. ಅವನ ಕಣ್ಣಿಗೆ ಲೋಕಪಾವನೆಯು ಕಸವಾಗಿ, ಓಣಿಯ ಅಗಸನೇ ಹೆಚ್ಚಾಗುತ್ತಾನೆ. ಆ ಅಗಸನಿಗೆ ಗುರುಸ್ಥಾನ! "ಆಹಾ! ರಜಕವ್ ಎನ್ನವ್ ಏಳಿಸಿದನಿಲ್ಲವ್ ಆದಂ ಎಳ್ಚರಿಸಿದವ್." ಪೂರ್ವದ ಮಹೋನ್ನತಿಯು ಎಂದಾದರೂ ಇದಕ್ಕೂ ಕೆಳಗಿಳಿಯಬಹುದೇ? ಅಷ್ಟೇ ಅಲ್ಲದೆ, ತಾನು ಮಾಡಿದ ಕಾರ್ಯದಲ್ಲಿಯೇ ಶ್ರೀರಾಮಚಂದ್ರನಿಗೆ ವಿಶ್ವಾಸವಿಲ್ಲ: "ಆಗಳ್ ರಕ್ಕಸನ ಬಂದಿಯೊಳ್ ಆಳ್ದಳಂ ಮಗುಳ್ಚಿಂ ಆನ್ ಆಳ್ವೊಡ ಕ್ಕುಮೆ?" ಎಂದು ಅವನಿಗೆ ಮರುಪ್ರಶ್ನೆ. ಧೀರ ಕ್ಷತ್ರಿಯನಾಗಿ, ಆದರ್ಶ ರಾಜನಾಗಿದ್ದ ರಾಮಚಂದ್ರನಲ್ಲಿ ಇಂಥ ಮನಸ್ಸಿನ ಹೊಯ್ದಾಟವೇ? ಈ ರೀತಿ ಅವನ ಅಭಿಪ್ರಾಯವೇ ಆಗಿದ್ದರೆ, ಅದನ್ನು ಈ ಮೊದಲೇ ಹೇಳಬಹುದಿತ್ತಲ್ಲ! ಸೀತಾ

ದೇವಿಯನ್ನು ಪುನಃ ಸ್ವೀಕರಿಸುವಾಗ ಸಾಮಾನ್ಯರ ಹಾಗೆ ಅವನಿಗೇನೂ ಭಿಡೆ ಮುರುವತ್ತುಗಳಿರಲಿಲ್ಲ.

ಆದರೆ, ಇಲ್ಲಿಗೇ ಶ್ರೀರಾಮಚಂದ್ರನ ಕಥೆ ಮುಗಿಯುವಂತಿಲ್ಲ. ಸೀತಾದೇವಿಯು ತನ್ನ "ಮನಃಪ್ರೀತೆ"ಯೆಂದು ಸ್ವತಃ ತಾನು ಒಡಂಬಟ್ಟರೂ ಲೋಗರ ಮಾತಿನ ಮನ್ನಣೆಗಾಗಿ ಅವಳನ್ನು ಬಿಡಬೇಕೆಂದು ನಿರ್ಧರಿಸಿದ್ದರಲ್ಲೂ ಯಾವ ಹೆಚ್ಚಳವೂ ಕಂಡುಬರುವದಿಲ್ಲ. "ಮನಃ ಪ್ರೀತೆ"ಯೆಂದು ಒಡಂಬಟ್ಟು, ಕೇವಲ "ಕರ್ತವ್ಯಪರಿಪಾಲನೆಗಾಗಿ" ಅವಳನ್ನು ಬಿಡಹೊರಟ ಶ್ರೀರಾಮಚಂದ್ರ "ಇನ್ನೇವೆಂ? ಕೆಯ್ವೊಲನೊಳ್ ಬೆಳೆದ **ಕುಱುಂಬುಲ್ಲಂ ಕಿಳ್ತು ಬಿಸುಡುವಂತಿರೆ ಸೀತೆಯುಂ ಬಿಡುವೆ**" ಎಂದು ಮೊದಲಾಗಿ ಸಾಮಾನ್ಯ ಮಾತುಗಳನ್ನು ಆಡಬಾರದಾಗಿತ್ತು. ಜೀವಿತೇಶನಿಗಾಗಿ ತನ್ನ ಆತ್ಮಾರ್ಪಣವನ್ನೇ ಮಾಡಿ, ಅವನನ್ನೇ ಆಶ್ರಯಿಸಿದ ಸೀತಾದೇವಿ ಕೇವಲ "ಕುಱುಂಬುಲ್ಲೇ"—ಕಸಕಡ್ಡಿಯೇ? ಒಬ್ಬರಿಗೆ ಮರ್ಯಾದೆಯನ್ನು ತೋರಿಸುವ ಅವಸರದಲ್ಲಿ ಹತ್ತಿರದವರ ಕೆನ್ನೆಗೆ ಕೊಡುವುದು ಎಂದೂ ಬುದ್ಧಿವಂತರ ಲಕ್ಷಣವಾಗದು.

ಹೀಗೆ ನಿಶ್ಚಯಿಸಿದ ರಾಮಚಂದ್ರನು ತಮ್ಮಂದಿರ ಸಮ್ಮತಿಯನ್ನು ಕೇಳಬಯಸಿದ್ದೂ ಕೇವಲ ನೆಪ. ಒಂದು ನಾಟಕ. ಸ್ವತಃ ಭರತಶತ್ರುಘ್ನಾದಿಗಳು ಸೀತಾದೇವಿಯು ಪರಿಶುದ್ಧಳೂ, ತುಂಬಿದ ಬಸಿರಿಯೂ ಎಂದು ಪದೇ ಪದೇ ಹೇಳಿದರೂ, ಮೊದಲೇ ಮನಸ್ಸು ನಿಶ್ಚಯಿಸಿದ ರಾಮಚಂದ್ರನಿಗೆ ಅವರ ಮಾತನ್ನು ಕೂಡ ಕೇಳುವಷ್ಟು ತಾಳ್ಮೆಯಿಲ್ಲ. ಅಂತಲೇ, ಶಾಲೆಯ ಹುಡುಗರ ಹಾಗೆ "ತಮ್ಮ, ಕೆಮ್ಮನಿರ್! ಧರ್ಮಮ್ ಅಂತುಟು" ಎಂದು ಭರತನನ್ನು ಗದರಿಸಿ ತನ್ನ ಕಾರ್ಯಕ್ಕೆ ಸಿದ್ಧನಾಗುತ್ತಾನೆ. ಈ ಫೂತ್ಕಾರ ಚೀತ್ಕಾರಗಳಲ್ಲಿ ನಿರಪರಾಧಿ ಲಕ್ಷ್ಮಣನಿಗೂ ಸೆಕೆ ತಾಕದೆ ಹೋಗುವದಿಲ್ಲ. ಸೀತಾದೇವಿಯನ್ನು ಪುನಃ ಸ್ವೀಕರಿಸಿದ "ಅಪರಾಧ"ವನ್ನು ಕೂಡ, ಹುಲುಮನುಜರ ಹಾಗೆ ರಾಮಚಂದ್ರನು ಲಕ್ಷ್ಮಣನ ಮೇಲೆ ಹಾಕಲು ಯತ್ನಿಸುತ್ತಾನೆ. ಅವನು ಲಕ್ಷ್ಮಣನಿಗೆ ಆಡಿದ ಮಾತುಗಳು ಇವು: "ಮುನ್ನ ಲಂಕೆಯೊಳ್ **ನೀನೆ** ಪೇಳ್ದೆಯಲ್ತೆ ಸೀತೆ ಪೂತೆ, ಅವಳಂ ಕೈಕೊಳ್ವುದೆಂದು. ಈಗಳ್ ಏನಾಯ್ತು ?" ಇದು ನೃಪ-ಸಹಜವಾದ ಧೀಮಂತಿಕೆಯೇ ? ರಾಮನು

ಈ ದೋಷಾರೋಪಣೆಯ ವೇಳೆಯನ್ನು ಮಾತ್ರ ಕಾಯುತ್ತ ಕುಳಿತಿದ್ದನೇ ? ಇದರಲ್ಲಿ ಯಾವ ಪುರುಷ ಸಹಜವಾದ ಋಜುತ್ವವಿಲ್ಲ.

ಶ್ರೀ ರಾಮಚಂದ್ರನ ಮಾತು ಇಲ್ಲಿಗೇ ಮುಗಿಯುವದಿಲ್ಲ. ಈ ರೀತಿ ತಮ್ಮಂದಿರನ್ನು ಗದರಿಸಿ ಕಳಿಸಿದ ಮೇಲೆ, ಲಕ್ಷ್ಮಣನಿಗೆ ಹೇಳುತ್ತಾನೆ-- ತಾನು ಪರೆಯುಚ್ಚಿದ ಹಾವಿನ ಹಾಗೆ ಇರುವದಾಗಿ "ನಿರ್ಮೋಕ ನಿರ್ಮುಕ್ತ ನಿರ್ಮಲನಪ್ಪ ಫಣಿಯು"ಂತೆ ಇರಬಯಸುತ್ತಾನೆ. ಏನೇ ಆಗಲಿ; ಸಾಧ್ವಿ ಸೀತಾದೇವಿಯನ್ನು ಹಾವಿನ ಪರೆಗೆ ಹೋಲಿಸುವಲ್ಲಿ, ತನ್ನ ಸರ್ಪಜಾತಿಯನ್ನಾದರೂ ಒಪ್ಪಿಕೊಂಡಿದ್ದಾನೆ!........ ಆದ್ದರಿಂದ ಅವನ ಮನಸ್ಸು ದೃಢವಾಗಿದೆ. "ಈ ಸೀತೆಯಂ ತೊರೆದೇ ಸೊಗಂ ಬಾಳ್ವೆಂ; ಇದು ಸಿದ್ಧಂ." ಸೀತಾದೇವಿಯನ್ನು ತೊರೆದ ಬಾಳು ರಾಮಚಂದ್ರನಿಗೆ ಸುಖದ ಬಾಳು! ಇದನ್ನು ಕಂಡ ಲಕ್ಷ್ಮಣನು ಕೂಡ ತನ್ನ ರೋಷವನ್ನು ತಡೆಯಲಾರದೆ ಆಕ್ರೋಶ ಮಾಡುತ್ತಾನೆ: "ಇದೆ ಕೊಳ್ ಚಂಡಾಲಂ ‡ ಸಿದ್ಧನಿರ್ಣಮ್" ಎಂದು.

ತಪ್ಪೋ ಒಪ್ಪೋ— ಅಂತೂ ಶ್ರೀರಾಮಚಂದ್ರನೇನೋ ಈ ರೀತಿ ಮನಸ್ಸು ಮಾಡಿದ್ದಾಯಿತು ಆದರೆ ಈ ನಿಶ್ಚಯವನ್ನು ಕಾರ್ಯರೂಪಕ್ಕಿಳಿಸುವುದರಲ್ಲಿಯಾದರೂ ಏನಾದರೂ ಪುರುಷಲಕ್ಷಣವಿದೆಯೋ ನೋಡೋಣ. ಪೆಂಕುಳಿ ಪ್ರಾಣಿ ಪುರುಷಗಾಂಭೀರ್ಯವನ್ನು ಪಡೆಯದು. ಅದರಲ್ಲಿ ರಾಜನಾಗಿದ್ದ ವ್ಯಕ್ತಿಯಂತೂ ಅಂಥ ಲಕ್ಷಣಗಳನ್ನು ತೋರಿಸಿದರೆ ಮತ್ತಷ್ಟು ಹೇಯ. ಮನಸ್ಸಿನಲ್ಲಿ ಮುಂದೊಂದು ಹಿಂದೊಂದು ಇಟ್ಟುಕೊಳ್ಳುವ ಸ್ವಭಾವವು ಜೀವನದಲ್ಲಿ ಹೇಯವಾಗಿದ್ದಂತೆಯೇ, ಸಾಹಿತ್ಯದಲ್ಲೂ ಗರ್ಹಣೀಯವಾಗಿದೆ. ಹೀಗಿರುವಲ್ಲಿ, ಶ್ರೀರಾಮಚಂದ್ರನು ಲಕ್ಷ್ಮಣನನ್ನು ಕರೆದು ಸೀತಾದೇವಿಯನ್ನು ಯಾವ ರೀತಿ ಬಿಟ್ಟುಬರಬೇಕೆಂದು ಹೇಳಿದನೆಂಬುದನ್ನು ಆಲಿಸಿರಿ:"ತಾನೆ ಸೀತೆ ದೋಹದದಿಂ ಅಡವಿಯುರಿಸಿವೆಣ್ಗಳಂ ಕಾಣಲ್ಕೆಂದು ಬಯಸಿದಳ್; ಅಂತದರಿಂ ಈ ನೆವದಿಂದ ಅಡವಿಯೊಳೆ ಉಳಿದು ಬಾರಾ"-- ಎಂದು ಹೇಳುತ್ತಾನೆ "ಈ ನೆವದಿಂ ಅಡವಿಯೊಳೆ ಉಳಿದು ಬಾರಾ"—

‡ ಆಗಲೇ ಹೇಳಿದ ಹಾಗೆ, ಈ ಸಂದರ್ಭದಲ್ಲಿ ಲಕ್ಷ್ಮೀಶನ ರಾಮಚಂದ್ರನಲ್ಲಿ ಕೆಲವಷ್ಟಿನ ಒಳ್ಳೆಯ ಗುಣಗಳಾದರೂ ಇವೆ. ವ್ಯಥಿತನಾದ ರಾಮಚಂದ್ರನನ್ನು ಅವನ ಅನುಜರು ನೋಡಲು ಬಂದಾಗ "ಎದ್ದು ಕುಳ್ಳಿರ್ದು ಕರುಣಾಳುಗಳ ಬಲ್ಲಹಂ"

ರಾಜನಾಗಿ, ಕರ್ತವ್ಯಪರಿಪಾಲನೆಗಾಗಿ, ಎಂಥ ಮೋಹವನ್ನೂ ಬದಿಗೊತ್ತಿ ಆದರ್ಶವನ್ನು ಮೆರೆಯಬೇಕಾಗಿದ್ದ ಮಹಾವ್ಯಕ್ತಿಯೂ ಕೂಡ ಸಾಮಾನ್ಯರ ಹಾಗೆ ನೆಪಗಳನ್ನು ಆಶ್ರಯಿಸಬೇಕೇ? ಹಾಗಿದ್ದರೆ ಕರ್ತವ್ಯ ಪರಿಪಾಲನೆ ಎಲ್ಲಿದೆ? ಶ್ರೀರಾಮಚಂದ್ರನು ನಿಜವಾದ ಕರ್ತವ್ಯಪರಿಪಾಲಕನಾಗಿದ್ದರೆ, ಸೀತಾದೇವಿಯನ್ನು ಕರೆದು ಹೇಳಿ ಆ ರೀತಿ ಬಿಡಬಹುದಾಗಿತ್ತಲ್ಲವೇ? ಇದರಿಂದ ಅವನ ಚಾರಿತ್ರ್ಯವೂ ಉದಾತ್ತವಾಗುತ್ತಿತ್ತು; ಆದರ್ಶ ರಾಜ್ಞಿಯಾಗಿದ್ದ ಸೀತಾದೇವಿಯ ಮನಸ್ಸೂ ಬಹುಶಃ ಸಮಾಧಾನ ಹೊಂದುತ್ತಿತ್ತು. ಆದರೆ, ಮುದ್ದಣನ ರಾಮಚಂದ್ರನು ಹಾಗೆ ಮಾಡದೆ, ಹೇಡಿಯಂತೆ ಬೆನ್ನಲ್ಲಿ ಇರಿದು 'ಸಂದಿಯನ್ನು' ಸೇರುತ್ತಾನೆ. ಪುನಃ ಇದರಲ್ಲಿ ಪುರುಷ ಸಹಜವಾದ ಯಾವ ಧೀರವೃತ್ತಿಯೂ ಇಲ್ಲ.

ಈ ರೀತಿ ರಾಮಚಂದ್ರನ ಚಾರಿತ್ರ್ಯವು ಪತನಹೊಂದಿದ್ದನ್ನು ನೋಡಿ, ಇಡೀ ವಿಶ್ವವೇ ದಿಗಿಲುಗೊಂಡಿದ್ದರೆ ಆಶ್ಚರ್ಯವೇನೂ ಇಲ್ಲ. ಯಾಕಂದರೆ

---

ಅವರನ್ನು "ಮುದ್ದಗೈಯುತ್ತಾ"ನೆ. ಅಷ್ಟೇ ಅಲ್ಲದೆ ನೆರವಿಗಳಲ್ಲಿ "ಕದ್ದ ಕಳ್ಳನವೊಲ್ ಅಡಿಸಿಕೊಳ್ಳಲಾರೆ"ನೆಂದು ಹೇಳಿದರೂ, ಸೀತಾದೇವಿಯ ನಿಜಸ್ವರೂಪವೇನಿದೆಯೆಂಬುದು ಅವನಿಗೆ ಸುಸ್ಪಷ್ಟವಿದೆ. ಈ ಮಾತನ್ನು ಅವನು ಮುದ್ದಣನ ರಾಮನಕಿಂತ ಹೆಚ್ಚು ಸ್ಪಷ್ಟವಾಗಿ ಹೇಳುತ್ತಾನೆ: "ಇವಳಯೋನಿಜೆ, ರೂಪಗುಣಶೀಲಸಂಪನ್ನೆ ಭುವನಪಾವನೆ, ಪುಣ್ಯಚರಿತೆ, ಮಂಗಳಮಹೋತ್ಸವೆ, ಪತಿವ್ರತೆ— ಎಂಬುದಂ ಬಲ್ಲೆನಾದೊಡಂ" "ನಿಂದೆಗೊಳಗಾದ ಬಳಿಕ" ಅವಳನ್ನು ಬಿಡಲೇ ನಿರ್ಧರಿಸುತ್ತಾನೆ. ಅದೂ ಅಲ್ಲದೆ ಈ ಪರಿತ್ಯಾಗಕ್ಕೆ ಇನ್ನೂ ಒಂದ- ಕಾರಣವಿದೆ. "ರವಿಕುಲದ ರಾಯರಪಕೀರ್ತಿಯಂ ತಾಳ್ದಪರೆ? .. ... ಅಷ್ಟೇ ಏಕೆ? ಸ್ವತಃ ತನ್ನ ತಂದೆಯೇ ಈ ಅಪಕೀರ್ತಿಯನ್ನು ತಪ್ಪಿಸುವದಕ್ಕಾಗಿ ತನ್ನನ್ನು ಬಿಡಲಿಲ್ಲವೆ?— ಸಂಭಾವಿತಸ್ಯ ಚ ಅಪಕೀರ್ತಿಃ ಮರಣಾದ್ ಅತಿರಿಚ್ಯತೆ"— "ಕುಮರನಾಗಿರ್ದ ತನ್ನಂ ತಾತ ನುಳಿದುದಿಲ್ಲವೆ ಸತ್ಯಭಾಷೆಗಾಗಿ?" ಈ ಅಪಕೀರ್ತಿಯ ದೃಷ್ಟಿ ಯಾವಾಗಲೂ ಲಕ್ಷ್ಮೀಶನ ರಾಮಚಂದ್ರನೆದುರಿಗಿದೆ. ಅವನು ಕೂಡ ಒಂದೆರಡು ಸಲ "ಮಮತೆಯಂ ಮಹಾಯೋಗಿ ಬಿಡುವಂತೆ" ಎಂದು ಮೊದಲಾಗಿ ಎಡವಿ ಹೇಳಿದ್ದರೂ, "ತಮ್ಮ ನೀನಾಡಿದಂತೆ ಅವನಿಸುತೆ ನಿರಜೆಯಹುದು;...... ಸೈರಿಸಲಾರೆನೀ ದೂಸರಂ; ಮಹಿಯೊಳ್ ಉಳಿದರೆ ಪೃಥು, ಪುರೂರವ ಹರಿಶ್ಚಂದ್ರಾದಿ ನರಪತಿಗಳು? ಸುಮ್ಮನೆ, ಅಪಕೀರ್ತಿಗೊಳಗಾಗಲೇತಕೆ?" ಎನ್ನುವದು ಅವನ ಮೂಲಸೂತ್ರ. ಉಳಿದ ಮಾತುಗಳಲ್ಲಿ ಲಕ್ಷ್ಮೀಶ ಮುದ್ದಣರ ರಾಮಚಂದ್ರರಲ್ಲಿ ವಿಶೇಷ ವ್ಯತ್ಯಾಸವೇನೂ ಕಾಣುವದಿಲ್ಲ. ಎರಡೂ ಹೆಚ್ಚು ಕಡಿಮೆ ಒಂದೇ ಪಡಿಯಚ್ಚು.

ಮುದ್ದಣ ಕವಿಯು ವರ್ಣಿಸುವಹಾಗೆ, ಈ ಅನುಚಿತವನ್ನು ಕಂಡು, ನಕ್ಷತ್ರ ಗಳು ದಿಕ್ಕು ತಪ್ಪುತ್ತವೆ; ಚಂದ್ರನು ಮ್ಲಾನವದನನಾಗುತ್ತಾನೆ; ದಂಪತಿ ಪಕ್ಷಿಗಳು ಸಂಕಟಪಡುತ್ತವೆ; ಕಮಲಿನಿ ಹಲಬುತ್ತಾಳೆ. ಸ್ವತಃ ಭಗವಾನ್ ಸೂರ್ಯನಾರಾಯಣನು ಈ ಗಲಭೆಯೇನೆಂದು ನೋಡಲು ಮೂಡುವೆಟ್ಟಿನ ಕೋಡುಗಲ್ಲನ್ನೇರಿ ನಿರುತ್ಸಾಹನಾಗಿ ನಿಲ್ಲುತ್ತಾನೆ. ಈ ದುರ್ಧರ ಕಾರ್ಯ ಕ್ಕಾಗಿ ಮುಂಬಂದ ಲಕ್ಷ್ಮಣನು ಕೂಡ ತಾನು "ತೊಳಚಿದೋಟದಲ್ಲಿ ಹುಟ್ಟಿದ ತುರಚಿ" ಎಂದು ಹೀಯಾಳಿಸಿಕೊಂಡು, "ಕೊಡಲಿಯು ಕಾವೆಂ ಬೋಲಾಯ್ತು ಪುಟ್ಟು" ಎಂದು ಪರಿತಪಿಸುತ್ತಾನೆ. ಜಗಚ್ಚಕ್ಷುವಾದ ಭಗ ವಾನ್ ಸೂರ್ಯನಾರಾಯಣನು ತನ್ನ ಕುಂದುಕೊರತೆಗಳನ್ನು ಮನ್ನಿಸಿ ಸಲಹಬೇಕಾಗಿ ಪ್ರಾರ್ಥಿಸುತ್ತಾನೆ

ಶ್ರೀರಾಮಚಂದ್ರನ ಈ ನಿಷ್ಕರುಣತ್ವವನ್ನು ನೋಡಿ, ಇದರ ಜೊತೆಗೆ ಸೀತಾದೇವಿಯ ಮುಗ್ಧಶಿಶುಹೃದಯವನ್ನೂ, ಅವಳ ಅವ್ಯಾಜ ಉತ್ಸಾಹ ವನ್ನೂ ಕಂಡಾಗ, ರಾಮಚಂದ್ರನ ಬಗ್ಗೆ ನಮ್ಮಲ್ಲಿ ಮತ್ತಷ್ಟು ಆದರವು ಕಡಿಮೆಯಾಗುತ್ತದೆ. ಯೂಪಸ್ತಂಭಕ್ಕೆ ಒಯ್ಯುತ್ತಿರುವ ಕರುವು ತನ್ನ ಭವಿತವ್ಯವನ್ನು ಅರಿಯದೆಯೇ, ಮುಂದಿನ ಹಸಿರನ್ನು ಮೇಯಲು ಹಾತೊರೆ ಯುವಂತೆ ಪಾಪ ಸೀತಾದೇವಿಯು ತನ್ನ ಸ್ಥಿತಿಯನ್ನು ಅರಿಯದೆಯೇ ಹರ್ಷಿತಳಾಗುತ್ತಾಳೆ. ಅಷ್ಟೇ ಅಲ್ಲದೆ, ತನ್ನ ವಾಂಛಿತವನ್ನು ಕರುಣಾಳು ರಾಘವನು ಪೂರೈಸಿದನೆಂದು ಅವನ ಬಗ್ಗೆ ಅವಳಲ್ಲಿ ತುಂಬಾ ಕೃತಜ್ಞತೆ ಯಿದೆ: "ಏನಯ್ ಮೈದುನ, ಜೀವಿತೇಶಂ ಎನ್ನೊಂದು ಬಿನ್ನಪಮಂ ತೂರದೆ ನಲ್ಮೆ ಮಿಗೆ ಪೊರೆದನೇ? ನಿನ್ನಂ ಪೇಳ್ದಟ್ಟಿದನಲ್ತೆ! ಕರುಣಾಕರನಲ್ತೆ! ದೀನೆಯುಂ ನಲ್ಲನಲ್ಲ ಮೇಣ್ ಅವಂ ಕಾವಂ!" ಆದರೆ ಅವನಿಗೆ ಯಾವಾಗಲೂ ಯಶಸ್ಸು ಮತ್ತು ಸೌಭಾಗ್ಯಗಳು ದೊರಕಲೆಂದು ಪ್ರಾರ್ಥನೆ "ಆಳ್ದನ ಅಡಿಗಾವರೆಗಳ್ ಆವಗಂ ಸೊಗಮಿರ್ಕೆ!"

ಹೀಗೆ ಸೀತಾದೇವಿಯು ಉತ್ಸಾಹಿತಳಾಗಿ, ಕೃತಜ್ಞತಾಪೂರ್ಣ ಅಶ್ರು ನಯನೆಯಾಗಿ ಆಶ್ರಮದ ಮುನಿಕಾಮಿನಿಯರ ಸಲುವಾಗಿ ಬಾಗಿನಗಳನ್ನು ಕಟ್ಟಿಕೊಂಡು ಸಿದ್ಧಳಾಗುವ ದೃಶ್ಯವಂತೂ ತುಂಬಾ ಕಾರಣ್ಯವುಳ್ಳುದು. ಹೀಗೆ ಹೊರಟಾಗ ಲಕ್ಷ್ಮಣನ ಮನಸ್ಸಿನಲ್ಲಿ ಅದೇ ತುಮುಲ ಹೋರಾಟ. ಒಂದು ಕಡೆಗೆ ನಿರ್ಮಲಳಾಗಿರುವ ಸೀತಾದೇವಿಯನ್ನು ಬಿಡಲು ಹೊರಟ

ಸಂಕಟ! ಮತ್ತೊಂದೆಡೆಗೆ, ಅಣ್ಣನ ಆಜ್ಞೆ—"ಅನುಲ್ಲಂಘ್ಯಃ ಗುರುವಚನಂ." ಹೀಗಾಗಿ, ಇಡೀ ಪ್ರಪಂಚವೇ ತನ್ನ ಹಾಗೆ ಹತಭಾಗಿಯಾಗಿದೆಯೆಂದು ಲಕ್ಷ್ಮಣನಿಗೆ ಭಾಸವಾಗುತ್ತದೆ. ತಾನು ಏರಿದ ರಥವು ಕೂಡ ತನ್ನಷ್ಟೇ ಪಾಪಿಷ್ಠವೆರಿದು ಎನಿಸುತ್ತದೆ. ಲಕ್ಷ್ಮೀಶನ ಲಕ್ಷ್ಮಣನು ಹೇಳುವ ಹಾಗೆ:—

"ಧುರದೊಳಾಂತರಂ ಇರಿದು ಮೆರೆಯುಲೇರುವ ರಥವ್
ತರಳೆಯಂ ಕಾನನಕೆ ಕಳುಹಲ್ ಅಡರ್ವವೊಲಾಯ್ತು;
ಧರೆಯೊಳ್ ಆರ್ತರಂ ಐದೆ ರಕ್ಷಿಸುವ ಬುದ್ಧಿ
ಕೋಮಲೆಯು ಕೊಲೆಗೆಲಸಕಾಯ್ತು;
ಕರಣಮಿಲ್ಲದೆ ಹೊರಿವ ಹರಣಮುಂ ಸುಡಲಿ ನಿ
ಷ್ಠುರದೊಳೆಂತೀ ಕೃತ್ಯಮೆಸಗುವೆನೊ ರಾಘವೇ
ಶ್ವರನೆಂತಿದಕ್ಕೆ ಬೆಸಸಿದನೊ ತನಗೆನುತೆ ಸೌಮಿತ್ರಿ
ಮರುಗುತೆ ನಡೆದನು"

ಸ್ವತಃ ಸಚೇತನನಾದ ತಾನೂ ಈ ರೀತಿ ಕೊಲೆಗೆಲಸಕ್ಕೆ ಸಿದ್ಧನಾಗಿರಲಾಗಿ ಮೂಕ ವಿಶ್ವವನ್ನು ಹಳಿದೇನು ಪ್ರಯೋಜನವೆಂದು ಸಮಾಧಾನ ಹೊಂದುತ್ತಾನೆ. ಕೆಲಬಲದ ಸ್ಥಾವರ ಜಂಗಮುಗಳು ಈ ವಿಪತ್ತನ್ನು ಕಂಡೂ ಕಾಣದ ಹಾಗೆ ಕಣ್ಮರೆಯಾಗುತ್ತವೆ. ರಥದ ಮೇಲಿನ ಪತಾಕೆಯು ಕೂಡ ರಾಘವನ ದೋಷವನ್ನು ಕಾಣಲಾರದೆ ವಿಮುಖವಾಗುತ್ತದೆ. ಲೋಕ ಪಾವನೆಯೂ ಕೂಡ ನಿರ್ಮಲವಾದ ಜಾಹ್ನವಿಯಲ್ಲಿ ಮಿಂದು ಶ್ರೀರಾಮ ಮುದ್ರಿಕೆಯನ್ನು ಅಭಿಷೇಕಮಾಡಿ, ಲಕ್ಷ್ಮಣನು ಆಯ್ದು ತಂದ ಹೂಗಳಿಂದ ಅಲಂಕರಿಸಿ, ಅದರ ತೀರ್ಥಪ್ರಸಾದವನ್ನು ಸ್ವೀಕರಿಸುತ್ತಾಳೆ. ದುಃಖಜರ್ಜರಿತನಾದ ಲಕ್ಷ್ಮಣನು ನಡೆಯಲ್ಲಿ ಹಿಂದಾದಾಗ, ಅದೇ ನಿರ್ಮಲಹೃದಯದಿಂದ "ಏಂ ಕಂದ, ನಡೆಯೊಳ್ ಪಿಂದಾದೈ; ಪಥದೊಳ್ ಕಲ್‌ಮುಳ್ಗಳ್ ಅಣಂ ಇಲ್ಲ; ಇಂತಿರೆ, ಪೆಣ್ ಆರಿ ಸಾಗಿಬರೆ, ನೀಂ ಗಂಡುಗಲಿ ನಡೆಯಲಾರೆಯಾ!" ಎಂದು ಮೃದುವಾಗಿ ಹುರಿದುಂಬಿಸುತ್ತಾಳೆ. ದಾರಿಯುದ್ದಕ್ಕೂ ಸಿಂಹಶಾರ್ದೂಲ ಭಲ್ಲೂಕಗಳಿಂದ ಕೂಡಿದ ಘೋರ ಕಾನನವನ್ನು ಕಂಡಾಗ ಪುನಃ ಅವಳ ಮನಸ್ಸು ಶ್ರೀರಾಮಚಂದ್ರನ ರಕ್ಷಣೆಯ ಕಡೆಗೇ ಓಡುತ್ತದೆ. ಇಂಥ ವಿಪತ್ತಿನಲ್ಲಿ ಕೂಡಾ ಅವಳಿಗೆ ರಾಮನಾಮವೇ ರಕ್ಷಣಯಂತ್ರ. ಅವನೇ ವಿಶ್ವಪಾಲ ಸಕಲ ಸೌಭಾಗ್ಯಮೂರ್ತಿ

ಯಾದ ಅವನನ್ನು ಬಿಟ್ಟು ಉಳಿದ ಕಡೆಗೆ ಮಾಂಗಲ್ಯವನ್ನು ಅರಸುತ್ತಿರುವ ತನ್ನ ನಡತೆಯನ್ನೇ ತಿರಸ್ಕರಿಸುತ್ತಾಳೆ: "ಹಾ ರಾಘವಾ! ಪ್ರಾಣನಾಯಕಾ! ಕೆಟ್ಟೆನೆಲ್ಲೈ! ಹಾ ಕರುಣಾಕರಾ, ಸೀತೆ ಪುಣ್ಯಮೂರ್ತಿಯಿರೆ ಪುಣ್ಯಾಶ್ರಮಂ ಪೆರತುಂಟೆ?....ಕಮಲಮಂ ಉಳಿದುಂ ಮಧುಭ್ರಾಂತಿಯಿಂ ಕಿಂಶುಕಕ್ಕೆರಗುವ ಭ್ರಮರನಂತಿರೆ, ನಿರ್ನೆರಂ ಕಾಡೊಳಾದೆಂ. ನಿನ್ನ ಅಡಿದಾವರೆಯುಂ ಉಳಿದು ಬಂದೆಡೆ, ಇಂತೆನಗೆ ಈ ವಿಧಿಯಾಯ್ತು! ಹಾ! ಶ್ರೀರಾಮಚಂದ್ರಮಾ! ಮುಂತೇನ್ನೆ?" ಎಂದು ಅಲ್ಪರೆದು ಹಂಬಲಿಸುತ್ತಾಳೆ. (ಈ ಸಂದರ್ಭದಲ್ಲಿ ಲಕ್ಷ್ಮೀಶನು ಚಿತ್ರಿಸಿದ ಸೀತಾದೇವಿಯ ಮಾತುಗಳನ್ನೂ ನೆನೆಯಬಹುದು: ಆ ಪದ್ಯದ ಓಟದ ಸುಭಗತೆ, ಭಕ್ತಿಪಾರಮ್ಯವನ್ನೂ ಗ್ರಹಿಸಬಹುದು:

"ಪಾವನಕೆ ಪಾವನಂ ಮಂಗಳಕೆ ಮಂಗಳಮ್ ಅದಾವನ ಚರಿತ್ರೆ
ನಾಮಂಗಳ್ ಆ ರಾಘವನೆ ಜೀವೇಶನಾಗಿರಲ್ಕೆ, ಆತನಂಘ್ರಿಯುಂ
ಅಗಲ್ದೀಗ ನಾಂ ಬಂದ ಬಳಿಕ, ಈವನದೊಳ್ ಇನ್ನು ಪುಣ್ಯಾಶ್ರ
ಮಂ ಗೋಚರಿಪುದೇ—? ವನಜದ ಅರಳಮ್ ಉಳಿದು ಆರಡಿಗೆ
ಬೊಬ್ಬುಳಿಯ ಪೂವಿನೊಳ್ ಮಧುವುಂಟೆ? ಸೌಮಿತ್ರಿ ಹೇಳೆಂದು
ಸೀತೆ ಪೊದಕುಳಿಗೊಂಡಳು" .

ಹೀಗಾಗಿ, ಕೊನೆಗೆ ಅನಿವಾರ್ಯವು ಘಟಿಸಲೇಬೇಕಾಗುತ್ತದೆ ಈ ವರೆಗೆ ಹೇಗೋ ನುಂಗಿ ಹಿಡಿದಿದ್ದ ವಿಷವನ್ನು ಲಕ್ಷ್ಮಣನು ಹೊರಕ್ಕೆ ಹಾಕಬೇಕಾಗುತ್ತದೆ. ಲಕ್ಷ್ಮಣನು ವಿಷಯವನ್ನು ಹೇಳಿಬಿಡುತ್ತಾನೆ. ಪ್ರತಪ್ತ ಆಕ್ರೋಶದಲ್ಲಿ "ಇದೆ ಕೊಳ್ಳಿಂ, ಸ್ವಾಮಿಕಾರ್ಯಧುರಂಧರಂ, ಅಗ್ರಜನ್ಮ ಆಜ್ಞಾನುವರ್ತಿ, ವೀರಾಗ್ರಗಣ್ಯಂ, ಕೃತಕೃತ್ಯಂ ನಚ್ಚಿನ ಮೈದುನನೆಂ" ಎಂದು ತನ್ನ ಅಳಲನ್ನು ಹೊರಸೂಸುತ್ತಾನೆ

ಈ ಮಾತನ್ನು ಕೇಳಿದ ಕೂಡಲೆ, ಮುಂಗಾರ ಹೊಡೆತಕ್ಕೆ ಉರುಳಿ ಬೀಳುವ ಹೂವಿನ ರಾಶಿಯ ಹಾಗೆ, ಪ್ರಬಲ ಪ್ರಭಂಜನದ ಹೊಡೆತಕ್ಕೆ ಹೊರಳುವ ಕಪ್ಪುರ ಬಾಳೆಯ ಹೀಗೆ, ಸೀತಾದೇವಿಯು ಭೂಮಿಗೆ ಉರುಳುತ್ತಾಳೆ. ಲಕ್ಷ್ಮಣನು ಹೇಗೆ ಹೇಗೋ ಕಮಲಪತ್ರದಲ್ಲಿ ನೀರನ್ನು ತಂದು ಅವಳನ್ನು ಉಪಚರಿಸುತ್ತಾನೆ ಈ ಶೈತ್ಯೋಪಚಾರ ಸಪರ್ಯೆಗೆ ಎಚ್ಚತ್ತ ಸೀತಾದೇವಿ ಇಂಥ ದಾರುಣವಾದ ಪರಿಸ್ಥಿತಿಯಲ್ಲಿ ಕೂಡ ಆಡುವ ಮಾತುಗಳಾವು?— ಈಗ್ಲೂ ಅವಳಿಗೆ ಶ್ರೀರಾಮಚಂದ್ರನ ಬಗ್ಗೆ ಮುನಿಸಿಲ್ಲ; ಅನಾದರವಿಲ್ಲ.

ತಾನು ನಂಬಿದ ದೈವವು ಮಾತ್ರ ಬಯಲಾಯಿತೆಂದು ಹಲಬುತ್ತಾಳೆ. ನಿಜ ವಾಗಿ ತಪ್ಪೇ ಆಗಿದ್ದರೆ, ತನ್ನ ದೋಷವನ್ನು ಹೇಳಿ ಮನ್ನಿಸಿ ಕಾಯಬೇಕಲ್ಲವೇ ಎಂದು ಪ್ರಾರ್ಥಿಸುತ್ತಾಳೆ. ಇದು ವೀರಿ ಮಾತೇ ಹಾಗಿದ್ದರೆ "ಊರಲ್ಲಿ ಮಾರಿಯೆಂದು ಮನವ್ರೋರಿಯಂ ಮಾರುಗುಡುವರೆ?" ಎಂದು ಪ್ರಶ್ನಿಸು ತ್ತಾಳೆ. ನಿಜವಾಗಿಯೂ ಮುದ್ದಣ ಕವಿಯು ಈ ಮೊದಲೇ ಹೇಳಿದಂತೆ, ಲೋಕಮಾತೆಯು "ಪಾಲ್ಗಡಲೊಳ್ ಅಮರ್ದುಂ ಪುಟ್ಟಿದುದಂ ನೆನೆದಳಲ್ಲದೆ ನಂಜುರ್ಕಿದುದಂ ಏಗೆಯ್ದುಂ ಬಗೆಯದಾದಳ್". ಮುದ್ದಣನ ಹಾಗೆ ನಮಗೂ ಈ ಸಂದರ್ಭದಲ್ಲಿ "ಅಳಲ್ ಕೊರಲನೌಂಕುಗುಂ". "ಇಂಥ ಪೆಣ್ಗಳೊಂದು ಬಾಳ್ತೆ ಬಾಳ್ತೆಯೇ?"....

ಈ ಸಂದರ್ಭದಲ್ಲಿ ಲಕ್ಷ್ಮೀಶ ಕವಿಯು ಚಿತ್ರಿಸಿದ ಸೀತಾದೇವಿಯ ಪಾತ್ರದಕಿಂತ ಮುದ್ದಣನ ಚಿತ್ರವು ಹೆಚ್ಚು ಮನೋಹರವಾಗಿದೆಯೆಂದೇ ಹೇಳಬೇಕು. ರಾಮಚಂದ್ರನ ಚಿತ್ರಣದಲ್ಲಿ ಮುದ್ದಣನು ಕಳೆದುಕೊಂಡಿರ ಬಹುದಾದ ನಷ್ಟವನ್ನು ಸೀತಾದೇವಿಯ ಪಾತ್ರದಲ್ಲಿ ಸರಿಮಿಗಿಲಾಗಿ ಪೂರ್ತಿ ಮಾಡಿಕೊಂಡಿದ್ದಾನೆ. ಯಾಕಂದರೆ, ಲಕ್ಷ್ಮೀಶನ ಸೀತಾದೇವಿಯ ಬಾಯಲ್ಲಿ ಸಾಮಾನ್ಯ ಲೋಗರ ಹಾಗೆ ನಾಲ್ಕಾರಾದರೂ ಕಟುಮಾತುಗಳು ಹೊರಡದೆ ಇಲ್ಲ. ಅಷ್ಟೇ ಅಲ್ಲದೆ ಲಕ್ಷ್ಮಣನನ್ನು ಮೊದಲ್ಗೊಂಡು ರಾಮಚಂದ್ರನಿಗೂ ಒಂದೆರಡು ಚುಚ್ಚುಮಾತುಗಳು ತಾಕದೆ ಹೋಗುವದಿಲ್ಲ. ಈ ಸಂದರ್ಭ ದಲ್ಲಿ ಅವಳು ಆಡಿದ ಮಾತನ್ನು ಅವಳ ಬಾಯಿಂದಲೇ ಕೇಳಿರಿ:

"ಆರಿರ್ದೊಡೇಗೆಯ್ವರ್ ಇದು ತನ್ನ ಮರುಳಾಟವು; ಆ ರಾವಣನ ತಮ್ಮನೈಸತಿ ವಿಭೀಷಣಂ; ಭೀರುಗಳಂ ಅರಿದಪನೆ? ಸೋದ ರಂಗುರೆ ಮುಳಿದ ಸುಗ್ರೀವನೆಂಬವಂಗೆ ಕಾರುಣ್ಯಮಿರ್ದಪುದೆ? ಮತ್ತುಳಿದ ಮಂತ್ರಿಗಳದಾರುಂಟು?....ನೀನೊಪ್ಪಿ ಘೋರಾಟವಿಗೆ ಕೊಂಡು ಬಂದೆ...." ಇತ್ಯಾದಿ. ಪುನಃ ಸೀತಾದೇವಿಯ ಬಾಯಲ್ಲಿಯ ಈ ಕಟಕಿ ಯನ್ನೂ ಕೇಳಿರಿ:

"ಏಕೆ ನಿಂದಿಹೆ ಪೋಗು ಸೌಮಿತ್ರಿ, ಕೋಪಿಸನೆ ಕಾಕುತ್ಸನಿಲ್ಲಿ ತಳುವಿ ದೊಡೆ? ನೆರವುಂಟು ತನಗೆ ಈ ಕಾಡೊಳುಗ್ರಜಂತುಗಳಲ್ಲಿ; ರಘು ನಾಥನೇಕಾಕಿಯಾಗಿರ್ಪನು!" ಅಂತಲೇ ಲಕ್ಷ್ಮೀಶನ ಸೀತಾದೇವಿಯು

ಸಾಮಾನ್ಯರ ಈ ಮಾತುಗಳನ್ನು ಬಿಟ್ಟು ಪುನಃ ಆದರ್ಶದ ಉತ್ತರಕ್ಕೆ ಬರ ಬೇಕಾದರೆ ಒಂದು ರೀತಿಯ ಸ್ವಂತಸಮಾಧಾನವನ್ನು ಹೇಳಿಕೊಳ್ಳಬೇಕಾಗು ತ್ತದೆ. "ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ; ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದು ಎನ್ನೊಳ್ ಅಪರಾಧಮುಂಟು" ಎಂದು ಹೇಳಿಕೊಳ್ಳಬೇಕಾಗುತ್ತದೆ.

ಮುದ್ದಣನ ಸೀತಾದೇವಿಯಲ್ಲಿ ಈ ರೋಷವೂ ಇಲ್ಲ; ಇಂಥ ಸಮಾ ಧಾನದ ಆವಶ್ಯಕತೆಯೂ ಇಲ್ಲ. ಇದಕ್ಕೆ ಈ ಇಬ್ಬರೂ ಕವಿಗಳೂ ಅನುಸರಿ ಸಿದ ಆಕರಗಳೂ ಕಾರಣವಿರಬಹುದು. ಅಂತಲೇ ಸಪ್ತಕನ್ನಿಕೆಯರಲ್ಲಿ ಆದರ್ಶಳಾಗಿದ್ದ ಸೀತಾದೇವಿಯ ಬಾಯಿಂದ ಒಂದು ಕೂಡ ಕಟು ಮಾತು ಹೊರಬರುವದಿಲ್ಲ. ಇದೇನೂ ಅವಳ ಮಾನವ್ಯತೆಯ ಲಕ್ಷಣದ ಕೊರತೆ ಯೆಂದು ಭಾವಿಸಕೂಡದು. ಸೀತಾದೇವಿಯನ್ನು ಇಂದು ನಾವು ದಿನಾಲು ಪ್ರಾರ್ಥಿಸುತ್ತಿದ್ದುದು, ಅವಳು ನಮ್ಮ ಹಾಗೇ ಸಾಮಾನ್ಯ ಮಣ್ಣಿನ ವ್ಯಕ್ತಿ ಯಾಗಿರುವಳೆಂದಲ್ಲ; ಆದರೆ ಸತ್ಯ ಮತ್ತು ತಾಳ್ಮೆಗಳ ಪ್ರತೀಕವಾಗಿದ್ದಳೆಂದು. ಆದ್ದರಿಂದ ಮುದ್ದಣನ ಸೀತಾದೇವಿಯು ಯಾರನ್ನೂ ಬಯ್ದಾಡುವದಿಲ್ಲ. ಇಂಥ ದುರ್ಧರ ಪ್ರಸಂಗ ಅವಳಿಗೆ ಬಂದುದು ಅವಳ ಪ್ರಕಾರ ಪೂರ್ವಜನ್ಮ ದಲ್ಲಿ ಯಾವ ದಂಪತಿಗಳನ್ನು ಅಗಲಿಸಿದ್ದಕ್ಕೋ, ಇಲ್ಲವೆ ಪತಿವ್ರತೆಯನ್ನು ಹಳಿದದ್ದಕ್ಕೋ ಇರಬಹುದು!

ಸ್ವತಃ ರಾಮಚಂದ್ರನು "ಗೋರಿಟ್ಟ ಸೈಪಂ ದುರ್ವಿಷಯಂಗಳ್ಗೆ ಸೂರೆ ಗೊಟ್ಟು, ನಿರಯದ ಬಾಗಿಲ್ಗಾಪಿಗೆಂದು ದಕ್ಷಿಣಾಭಿಮುಖನಾಗಿ ಪೋಪಂತೆ" ಸೀತಾದೇವಿಯನ್ನು ಮೋಸದಿಂದ ಕಾನನಕ್ಕಟ್ಟಿದ್ದರೂ, ಅವಳಿಗೆ ಮಾತ್ರ ಅವ ನಲ್ಲಿ ಇನ್ನೂ ಅಪಾರವಾದ ಶ್ರದ್ಧೆಯಿದೆ. ಅವನೇ ತನ್ನ ಆಧಾರನೆಂದು ಇನ್ನೂ ನಂಬಿದ್ದಾಳೆ. ಅದೇ ಮೊದಲಿನ ಭಕ್ತಿವಿಶ್ವಾಸಗಳಿಂದ ಅವನ ಪಾದ ದಲ್ಲಿ ಪ್ರಾರ್ಥನೆ ಸಲ್ಲಿಸುತ್ತಾಳೆ:

"ರಾಘವಂ ಎನ್ನಂ ಉಳಿದೊಡಂ ಆನೆಂತುಂ ಆತನಡಿಯಂ ಬಿಡೆಂ; **ಆತನೆ ಎನಗೆ ಗುರು; ಆತನೆ ನಾಥಂ; ಆತನೆ ಜೀವಂ; ಆತನೆ ಭಾಂ ಧವಂ."** ಅಷ್ಟೇ ಅಲ್ಲದೆ, "ರಾಘವನ ಶಾಸನಂ ನಾಡಂ ಸಮಂತು ಕಾಡಂ ಕೊರತೆಯಿಲ್ಲದೆ ಆಳ್ಗುಮಲ್ತೆ! **ಆತನ ಅಡಿಯೊಲ್ಮೆಯೊಂದೆ ಇರಲ್ಕೆ!"**— ತನ್ನ ಕೊನೆಯ ವಾಂಛಿತವಾಗಿ, ರಾಮಚಂದ್ರನೇನಾದರೂ ತನ್ನ ವಿಷಯವನ್ನು

ಕೇಳಿದರೆ, 'ಅಬಲೆ ಮರುಗಿದಳಿಲ್ಲ; ಮಾರ್ನುಡಿದಳಿಲ್ಲ; ದೂರಿದಳಿಲ್ಲ; ನೀನೆ ಗತಿಯೆಂದು ನಿನ್ನ ಅಡಿಯಂ ನೆನೆಯುತೆ ಕಡೆವೊಳ್ತಂ ಪಾರುತಿರ್ಪಳ್'' ಎಂದು ಹೇಳಬೇಕಾಗಿ ಬಿನ್ನವಿಸುತ್ತಾಳೆ. ಅತ್ತೆಯಲ್ಲಿ ಕ್ಷಮೆ ಕೇಳುತ್ತಾಳೆ. ಊರ್ಮಿಳಾದ್ಯರಿಗೆ ತನ್ನನ್ನು ಮರೆಯಬಾರದೆಂದು ಬಿನ್ನವಿಸಿಕೊಳ್ಳುತ್ತಾಳೆ. ಎಲ್ಲಕ್ಕೂ ಹೆಚ್ಚೆಂದರೆ ಜಗತ್ಕಲ್ಯಾಣಕ್ಕಾಗಿ ಹುಟ್ಟಿದ, ಲೋಕಮಾತೆಯು ಲೋಗರ ಅನುವಿಗೊಂದು ದಮ್ಮಣಿಯನ್ನು ಏರ್ಪಡಿಸಬೇಕೆಂದು ಲಕ್ಷ್ಮಣನನ್ನು ಪ್ರಾರ್ಥಿಸುತ್ತಾಳೆ.

ಈ ರೀತಿ ರಾಘವನ ಪಾದತಲದಲ್ಲೇ ಸರ್ವಸ್ವವನ್ನು ಒಪ್ಪಿಸಿದ, ಸೀತಾದೇವಿಯ ಕನಿಕರ ಸ್ಥಿತಿಯನ್ನು ಕಂಡು ಯಾರು ಕಣ್ಣೀರಿಕ್ಕಲಿಕ್ಕಿಲ್ಲ?— ಅವಳನ್ನು ಬಿಟ್ಟು ತಿರುಗಿ ಹೊರಡುತ್ತಿರುವ ಲಕ್ಷ್ಮಣನು ಕೂಡ, ಗಾಳಿಗೆ ಬೀಸಿ ಹಿಂದೆ ಹೋಗುತ್ತಿರುವ ಕೌಸುಂಭಾಂಬರದಂತೆ, ಮನಸ್ಸಿಲ್ಲದ ಅಟ್ಟಿಯಂತೆ ಮಾತ್ರ ಹೊರಬರುತ್ತಾನೆ.

...."ಕೈವೊಲನೊಳ್ ಬೆಳೆದ ಕುಱುಂಬುಲ್ಲಂ ಬಿಸುಡುವ,"—— "ನಿರ್ವೇಕ ನಿರ್ಮುಕ್ತ ನಿರ್ಮಲನಪ್ಪ,"— "ರಜಕಂ ಎನ್ನಂ ಏಳಿಸಿದನಿಲ್ಲ: ಆದಂ ಎಚ್ಚರಿಸಿದಂ" ಎಂದು ರಜಕನ ಗುರುತ್ವಕ್ಕೆ ಮಾರುವೋಗುವ,— "ಪೊಂಜುರಿಗೆಯೆಂದೇ ಎರ್ದೆಗೊತ್ತಿದೆಂ", "ಸೀತೆಯಂ ತೊರೆದೇ ಸೊಗಂಬಾಳ್ವೆಂ"— ಎಂದು ಸಾರುವ ಶ್ರೀರಾಮಚಂದ್ರನಿಗೂ,

ಇಂಥ ಕವಡುತನದ ವಿಷಮ ಪರಿಸ್ಥಿತಿಯಲ್ಲೂ ಕೂಡ, "ಎಮ್ಮೆಲ್ಲರ್ಗೆ ಶ್ರೀರಾಮನ ಅಡಿದಾವರೆಯ ಒಲ್ಮೆಯೊಂದು ವಜ್ರಪಂಜರಮಕ್ಕೆ! ಸುಖದುಃಖಂಗಳ್ ಪಗಲಿರುಳಂತೆ ಲೋಕದೊಳ್ ಪರಿವರ್ತಿಸಿಕ್ಕುಂ; ಶ್ರೀರಾಮನೊಲ್ಮೆಯೊಂದೆ ಶಾಶ್ವತಂ; ಆತನ ನಾಮಸ್ಮರಣೆಯೇ ಎನಗೆ ಬಟ್ಟೆ; ಏ ಕರುಣಾಕರಾ, ನೀನೆನ್ನಂ ಕೈಬಿಡದಿರ್ಕೆ''— ಎಂದು ಹೇಳುವ ಸೀತಾದೇವಿಗೂ 'ಯಾವೂರ ಕೊಳ್ಕೊಡೆ'? ಷೇಕ್ಸಪಿಯರ ಕವಿಯ ಹ್ಯಾಮ್ಲೆಟ್ ಹೇಳುವ ಹಾಗೆ"Look here, upon this picture, and on this, the comtefeit presentment..." ಒಂದು ಅಪ್ಪಟ ಸುವರ್ಣನಾಣ್ಯ; ಮತ್ತೊಂದು "ಟೊಕ; ಟೊಕ"; "ಚಿಂದಿಬೊಂತೆಯ ಅರಸು"....ಅಂತಲೇ, ಮುದ್ದಣನು ಜನ್ನಗುದುರೆಯ ಕಥೆಯನ್ನು ಪುನಃ ಪ್ರಾರಂಭಿಸಲೆತ್ನಿಸಿದಾಗ, ಮನೋರಮೆಯಂತೆ ನಮಗೂ "ಸುಡು, ಸುಡು, ನಿನ್ನ ಜನ್ನಗುದುರೆಯಂ; ಸೀತೆ ಏನಾ

ದಳ್? ಎಂತಿರ್ದಳ್? ಎಂದು ಪೇಳ್ಕೆ" ಎಂದು ಕೇಳುವಂತೆನಿಸುತ್ತದೆ. ಸ್ವತಃ ಶ್ರೀರಾಮಚಂದ್ರನನ್ನು ನೋಡಿ ಅವನ ಬಗೆಗಿರುವ ಅಭಿಮಾನವು ಕಡಿಮೆ ಯಾದಾಗ, ಸೀತಾಮಾತೆಯು ಈ ಸುಂದರ ವಿಗ್ರಹವನ್ನು ನೋಡಿದಾಗ ಲಂತೂ ಮತ್ತಷ್ಟು ಕಡಿಮೆಯಾಗುತ್ತದೆ ಅವಳ ಬಗ್ಗೆ ಕಾರುಣ್ಯ ಹೆಚ್ಚಾ ದಂತೆಲ್ಲ. ರಾಮನ ಬಗೆಗಿರುವ ಅಭಿಮಾನವು ಕೆಳಗಿಳಿಯುತ್ತದೆ. ಅಷ್ಟೇ ಅಲ್ಲದೆ; ಮುದ್ದಣನ ಸೀತಾದೇವಿಯ ಚಿತ್ರವು ಲಕ್ಷ್ಮೀಶನ ಚಿತ್ರದಕಿಂತ ಎಷ್ಟೋ ಸಲ ಮೇಲೆನಿಸುತ್ತದೆ.

ಇದರಿಂದ ಮುದ್ದಣನ ರಾಮಪಾತ್ರದ ನಿರ್ವಾಹಣವು ಸರಿಯಾಗಿಲ್ಲ ವೆಂದೂ, ಅದು ತಪ್ಪಾಗಿ ಚಿತ್ರಿತವಾಗಿದೆಯೆಂದೂ ಸರ್ವಥಾ ತಿಳಿಯಬಾರದು. ಅವನಿಗೆ ಆದರ್ಶ ರಾಮಪಾತ್ರವು ಏನೆಂಬುದು ಸ್ಪಷ್ಟವಾಗಿ ಗೊತ್ತಿದೆ. ತನ್ನದೇ ಆದ ರೀತಿಯಲ್ಲಿ ಅವನು ಚಿತ್ರಿಸಬಹುದಾಗಿದ್ದರೆ, ಹೇಗೂ ಚಿತ್ರಿಸ ಬಹುದಿತ್ತು. ಆದರೆ ಮುದ್ದಣನು ಪೂರ್ವದ ಚಿತ್ರವನ್ನೇ ಗ್ರಹಿಸಿ, ಕೇವಲ ವೃತ್ತಿಕಾ–ವ್ಯವಸಾಯಕ್ಕೆ ಇಳಿಯದೆ, ತನ್ನ ಮತ್ತು ಮನೋರಮೆಯರ ಅಭಿಪ್ರಾಯಗಳನ್ನು ಸೇರಿಸಿ, ಸರಿಯಾದ ನಡೆವಳಿಕೆಯ ಸ್ಪಷ್ಟ ಕಲ್ಪನೆಯನ್ನು ಕೊಟ್ಟಿದ್ದಾನೆ. ರಾಮಚಂದ್ರನ "ದುರ್ನಯದ" ಅರಿವು ಅವನಿಗೆ ತುಂಬಾ ಇದೆ. ಸೀತಾದೇವಿಯ ವಿಯೋಗ ದುಃಖವನ್ನು ವಿವರಿಸುವಾಗ, ಅವನ ಕುತ್ತಿಗೆಯು ತುಂಬಿಬರುತ್ತದೆ— 'ಅಳಲ್ ಕೊರಲನೌಂಕುಗುಂ'— ಅವಳ ನಿರ್ವ್ಯಾಜವಾದ ಉತ್ಸಾಹವನ್ನು ಕಂಡಾಗ, "ಪಾಲ್ಗಡಲೊಳ್ ಅಮರ್ದು ಪುಟ್ಟಿದುದಂ ನೆನೆದಳಲ್ಲದೆ ನಂಜುಕರ್ಿದುದಂ ಏಗೆಯ್ವಂ ಬಗೆಯ ದಾದಳ್; ಆಃ ಭಾಗ್ಯಲಕ್ಷ್ಮಿ, ನಿನಗಮ್ ಈ ವಿಧಿಯಾಯ್ತೆ ?" ಎಂದು ಉದ್ಗಾರತೆಗೆಯುತ್ತಾನೆ ಅಷ್ಟೇ ಅಲ್ಲದೆ, ಅವನು ಕೂಡ "ಸುರಿವ ಅಶ್ರು ಜಲಮಂ ಕಿಱುವೆರಲಿಂ" ಮಿಡಿದು ಹೇಗೆ ಹೇಗೋ ಕಥೆಯನ್ನು ಮುಗಿಸಲು ಹವಣಿಸುತ್ತಾನೆ. ಆದರೂ, ಆ ಮುಂದು ರಾಮಚಂದ್ರನು ಕೂಡ ಪಶ್ಚಾ ತ್ತಾಪಪಟ್ಟನೆಂದು ಸಮಾಧಾನವನ್ನು ಕಂಡುಕೊಳ್ಳುತ್ತಾನೆ. ರಾಮಚಂದ್ರನ ಕಥೆ ಏನೇ ಆಗಲಿ; ತಾನು ಮಾತ್ರ ತನ್ನ ಜೀವನದಲ್ಲಿ ಇಂಥ ಪ್ರಮಾದವನ್ನು ಮಾಡಲಾಗದೆಂದು ಮನಸ್ಸು ಮಾಡುತ್ತಾನೆ— ಅವನು ಮನೋರಮೆ ಯನ್ನು ಎಂದಿಗೂ ಬಿಡ: 'ಸಾಜಮಲೆ ಪತಿಪತ್ನಿಗಳೊಳ್ ವಿಯೋಗದುಃಖಂ ರನ್ನೆ, ನಾನೊರ್ಮೆಯುಂ ನಿನ್ನನುಳಿದು ಬಾಳೆಂ; ಅಂತದರಿಂ ಎಮ್ಮೊಳ್

ಆವಗಂ ಪುದುವಾಳ್ಕೆಯುಂ, ದೀರ್ಘಾಯುಮುಂ ಶಿವಂ ನೆಲೆಗೆಯ್ಗೆ". "ರನ್ನೆ ನಾನೊರ್ಮೆಯುಂ ನಿನ್ನನುಳಿದು ಬಾಳೆಂ"— ಇದೀ ಸೀತಾಪರಿತ್ಯಾಗದ ಕಥೆಯನ್ನು ಹೇಳಿ, ಸ್ವತಃ ಕವಿಯ ಮನಸ್ಸಿನ ಮೇಲೇ ಈ ಪರಿಣಾಮವಾಗು ತ್ತಿದ್ದರೆ, ಮುದ್ದಣನಿಗೆ ಸರಿಯಾದ ರಾಮಪತ್ರದ ಕಲ್ಪನೆ ಇರಲಿಲ್ಲವೆಂದು ಹೇಳುವುದು ಸರಿಯಾಗಲಾರದು ಆದ್ದರಿಂದ ಮುದ್ದಣನು ಮೂಲದ ಚಿತ್ರವನ್ನಿಟ್ಟುಕೊಂಡರೂ, ಕೇವಲ ವೃತ್ತಿಕಾ ವ್ಯವಸಾಯಕ್ಕಿಳಿಯದೆ, ಅದಕ್ಕೆ ಹೊಸ ದೃಷ್ಟಿಯನ್ನು ಕೊಡಲು ಯತ್ನಿಸಿದ್ದಾನೆಂಬುದನ್ನು ಗಮ ನಿಸಬೇಕು.

ಹೀಗಾಗಿ, ಕವಿಯ ಕಾವ್ಯಪ್ರತಿಭೆಯ ಒರೆಗಲ್ಲಿನಂತಿದ್ದ ಈ ಸೀತಾಪರಿ ತ್ಯಾಗದ ಭಾಗವನ್ನು ಮುದ್ದಣನು ತನ್ನದೇ ಆದ ರೀತಿಯಲ್ಲಿ ನಿರ್ವಹಿಸಲು ಯತ್ನಿಸಿದ್ದಾನೆ. ಮೂಲದ ರಾಮಚಂದ್ರನ ಪಾತ್ರಕ್ಕೆ ಹೊಸ ದೃಷ್ಟಿಯನ್ನು ಸೇರಿಸಿ, ಸೀತಾದೇವಿಯ ಪಾತ್ರವನ್ನು ಹೆಚ್ಚು ಉನ್ನತವಾಗಿಮಾಡಿ, ಚಿತ್ರ ವನ್ನು ಪೂರ್ಣಮಾಡಿದ್ದಾನೆ. ಆದರೂ....ಆದರೂ.... ಶ್ರೀರಾಮಚಂದ್ರನ ಪೂರ್ವಚಾರಿತ್ರ್ಯಕ್ಕೆ ಅನುಗುಣವಾಗಿ, 'ಸೀತಾಪರಿತ್ಯಾಗ'ದಲ್ಲಿಯ ನಡೆವಳಿಕೆ ಯನ್ನು ಸಮನ್ವಯಿಸಿ ಹೇಳುವ ಕವಿಗೆ ಇನ್ನೂ ಸಾಹಿತ್ಯ ಪ್ರಪಂಚದಲ್ಲಿ ಸ್ಥಾನವಿದೆಯಲ್ಲವೇ....?

---

# ಸಾಹಿತ್ಯ ಮತ್ತು ಪ್ರಗತಿ



ಈ ವಾದದ ರಥವು ಸಾಗಿಹೋಗಿ ಎಬ್ಬಿಸಿದ ದೂಳು ಇಂದು ಸ್ವಲ್ಪ ನೆಲಕ್ಕೆ ಕುಳಿತಿದೆ. ಆ ದೂಳನ್ನು ಮರೆತು ಇಂದು ಓದುಗರು ಆ ರಥದ ಸತ್ಯಸ್ವರೂಪವನ್ನು ಕಾಣಬಹುದೆಂದು ತೋರುತ್ತದೆ. ಕೊಳಗುಳವನ್ನುಳಿದು ಬಂದ ಸೈನಿಕನು ತನ್ನ ಆವೇಶವನ್ನು ಒರೆಗಲ್ಲಿಗೆ ಹಚ್ಚಿ ನೋಡಬೇಕು. ಈ ಸ್ವರೂಪದರ್ಶನವನ್ನು ಈಗಾಗಲೇ ಅನೇಕ ಸಾಹಿತಿಗಳು ಕನ್ನಡ ಜನತೆಗೆ ನೀಡಿದ್ದಾರೆ....ಇಂದು ಈ ವಾದದ ಸ್ವರೂಪವೇನು? ನಾವು ಬೇಡುವುದೇನು? ಕಂಡುದು ಯಾವುದು? ಕನ್ನಡಕ್ಕೆ ಈ ಪ್ರಶ್ನೆಯ ಸಂಬಂಧ ಎಷ್ಟರಮಟ್ಟಿಗೆ? ಸಾಹಿತ್ಯ–ಪ್ರಗತಿಗಳೆಂದರೆ ಯಾವ ಅರ್ಥ?—ಇವನ್ನು ನಾವು ವಿಚಾರಿಸಬೇಕು.

ಭಾರತೀಯ ಪ್ರಗತಿಪರ ಸಂಸ್ಥೆಯ ಆಶೆ–ಉದ್ದೇಶಗಳೇನೇ ಇರಲಿ. ಕನ್ನಡದಲ್ಲಿ ಮಾತ್ರ ಸಾಹಿತ್ಯ ಬರಿಯ ಮುದ್ರೆ–ಅಕ್ಷತೆ–ವಿಭೂತಿ–ಪಂಗು ನಾಮಗಳನ್ನು ಧರಿಸಿಯೇ ಬೆಳೆದಿದೆಯೆಂದೂ, ಈಚೆಗೆ ಕೂಡ ಒಂದು ಮಠವು ಸ್ತೋಮ ಕಟ್ಟಿಕೊಂಡು ಸರ್ವಾಧಿಕಾರಕ್ಕಾಗಿ ಹಾತೊರೆಯುತ್ತಿದೆಯೆಂದೂ ಒಂದು ಕಡೆಯಿಂದ ಹೇಳಲಾಯಿತು. ಇಷ್ಟೇ ಅಲ್ಲ, ಕನ್ನಡ ಕವಿಗಳಿಗೆ "ಪ್ರಗತಿ"ಪರ ದೃಷ್ಟಿ ಇರಲಿಲ್ಲವೇನೋ ಎನ್ನುವ ವರೆಗೆ ಅಭಿಪ್ರಾಯ ತೂಗಿತು.

ಈ ಅಭಿಪ್ರಾಯದ ಅರ್ಥವೇನು? ಸಾಹಿತ್ಯ ಪ್ರಗತಿಗಳ ಜೊತೆಯೆಂತು? 'ಪ್ರಗತಿ' ಮಗುವಿಗೆ ತೊಡಿಸಿದ ಅಲಂಕಾರವೇ ಅಥವಾ ಕರ್ಣನ ಕವಚದ ಹಾಗೆ ಹುಟ್ಟನೊಂದಿಗೇ ಬಂದುದೇ? ಈ ವಿಚಾರವನ್ನು ನಾವು ಅರಿತುಕೊಳ್ಳಬೇಕು. ಕನ್ನಡಕ್ಕೆ ಈ ದೃಷ್ಟಿ ಇದ್ದಿತೇ—ಇದೆಯೇ? ಎನ್ನುವುದನ್ನು ಮನಗಾಣಬೇಕು........

ಸಾಹಿತ್ಯ ಪ್ರಗತಿಶೀಲವಾಗಿರಬೇಕೆನ್ನುವಲ್ಲಿ ನಾವು ಸ್ವಲ್ಪ "ಕೂಡಲ-ಸಂಗಮ" ವಿಚಾರ ಇಟ್ಟುಕೊಂಡ ಹಾಗೆ ಕಾಣುತ್ತದೆ. ಸಾಹಿತ್ಯ–ಪ್ರಗತಿ

ಶೀಲವಾಗದಿದ್ದಲ್ಲಿ ಅದರ ಉದ್ದೇಶವಾದರೂ ಏನು? ಬರಿಯ ಮನೋರಂಜನೆಯೆ?

ಸಾಹಿತ್ಯವು ಬರಿಯ ಮನೋರಂಜನೆಯ ಕೈಗೊಂಬೆ ಎನ್ನುವ ಉದ್ದೇಶವನ್ನು ಇಟ್ಟುಕೊಂಡಲ್ಲಿ ಎಷ್ಟೋ ಸುಂದರ ಸಾಹಿತ್ಯಕ್ಕೆ ನಾವು ಎರವಾಗಬೇಕಾದೀತು. ತನ್ನ ತಾಯ ಚಾರಿತ್ರ್ಯದ ಬಗ್ಗೆಯೇ ಸಾಶಂಕನಾಗಿ ಒರಲುವ ಹ್ಯಾಮ್ಲೆಟ್‌ನ ಆರ್ತತೆಯಲ್ಲಾಗಲಿ, ತನ್ನ ಮೂವರೂ ಹೆಣ್ಣು ಮಕ್ಕಳಿಂದ ಪರಿತ್ಯಕ್ತನಾಗಿ ವೃದ್ಧಾಪ್ಯದಲ್ಲಿ ಪ್ರತಿ ಬಾಗಿಲಿನಲ್ಲಿಯೂ ಕಾರುಣ್ಯ ಭಿಕ್ಷೆಯನ್ನು ಬೇಡುವ ಲಿಯರ್ ದೊರೆಯಲ್ಲಾಗಲಿ, ಇಜಿಪ್ತದ ಸಾಮ್ರಾಜ್ಞಿ ಕ್ಲಿಯೋಪಾತ್ರಳಿಗೆ ಹೇಳುವ ಕೊನೆಯ "Finish good lady; the bright day is done, we are for the dark" ಮಾತಿನಲ್ಲಾಗಲಿ, ಅನುಕಂಪೆಯಿದೆಯೆ ವಿನಾ ಮನೋರಂಜನೆ ತಿಲಮಾತ್ರವೂ ಸಿಕ್ಕದು ಹಾಗೆಯೇ

"ದಿವಸ ದಿವಸಗಳಿಂ ಕುಂ-
ದುವುವಲ್ಲದೆ ಬಳೆಯುವು ಆಯುವುಂವಸುವುಂ ಪೆ-
ರ್ಚುವುವಲ್ಲವು;....ಸುಖಕ್ಕೆ ಅವಚತ್ತಿಂ"

"ನಿಕೃಷ್ಟಮ್ ಈ ಸಂಸಾರಂ" ಎಂದು ಹೇಳುವ ರನ್ನನ ದರ್ಶನದಲ್ಲಿ ಮನೋರಂಜನೆ ಇದೆಯೇ? ಮನೋರಂಜನೆ ಕಾವ್ಯದಲ್ಲಿ ದ್ವಿತೀಯವಾಗಬಹುದೇ ವಿನಾ ಪ್ರಧಾನವಾಗಲಾರದು.

ಹಾಗೆಯೆ ಈ ಜಗತ್ತಿನ ಹೋರಾಟವನ್ನು ಸಹಿಸಲಾರದೆ ಎಲ್ಲಿಯಾದರೂ ಪಲಾಯನ ಬಯಸುವ "ಹೂವು-ಹೆಣ್ಣು-ಚಂದ್ರಿಕೆ"ಗಳ ಹಾಡೂ ಸಾಹಿತ್ಯವಾಗದು.

ಹಾಗಾದರೆ ಸಾಹಿತ್ಯದಿಂದ ನಾವು ಬಯಸುವುದೇನು?....ಎಂಬುದು ಪುನಃ ಪ್ರಶ್ನೆಯೆ. Raymond ಎಂಬ ಆಂಗ್ಲ ವಿಮರ್ಶಕರು ಇದನ್ನು ಸುಂದರವಾಗಿ ಹೇಳಿದ್ದಾರೆ. ಜೀವನದಲ್ಲಿ ಯಾವ ವಸ್ತುಗಳನ್ನು ನಾವು ನೋಡಿರುವುದಿಲ್ಲವೊ ಅದನ್ನು ಸರಿಯಾಗಿ ತೋರಿಸುವುದೇ ಸಾಹಿತ್ಯ. "Literature...makes us not only feel about more things but feel more about them." ನಿಜ; ಪರಿತ್ಯಕ್ತ ವೃದ್ಧನ ಕತೆಯನ್ನು ಕಾಣಲಿಕ್ಕೆ ಲಿಯರನೇ ಬೇಕಿಲ್ಲ; ಆದರೆ ಆ ಗ್ರಂಥವನ್ನು ಓದಿದಂದಿನಿಂದ

ನಮ್ಮ ನಮ್ಮ ಜೀವನದಲ್ಲಿಯೆ ನಾವು ಕಾಣಬಹುದಾದ ಅಂಥ ವ್ಯಕ್ತಿಗಳ ಬಗ್ಗೆ ಅನುಕಂಪೆ ಮಿಡಿಯುತ್ತದೆ. ಬೇಂದ್ರೆ ಅವರ "ಕರಿಮರಿನಾಯಿ" ಪತಿ ತರಿಗಾಗಿ ನಮ್ಮ ಒಳಗಣ್ಣನ್ನು ತೆರೆಯಿಸುತ್ತದೆ.

"ಭಲರೇ ಭಟ್ಟರು! ಮನೆಯನು ಕಾಯ್ದರು ಏನು ದಿಟ್ಟರೋ!
ಕುನ್ನಿಯು ಒಳಗೇ ಬಂದೇನೆಂದಿತು
ಭಟ್ಟರು ಬಂದರೆ ಕೊಂದೇನೆಂದರು!"

ಈ ಸಹಾನುಭೂತಿಗೆ—ಈ ಅನುಕಂಪೆಗೆ—ಕವಿಕೃತಿ 'ಸಾಹಿತ್ಯ'ವಾಗುತ್ತದೆ. Raymond ಅವರು ಹೇಳಿದ ಹಾಗೆ ನಮ್ಮ ಜೀವನದ ವೈಶಾಲ್ಯ, ವೈವಿಧ್ಯ, ಆಳವನ್ನು ತೋರಿಸದಿರುವುದು ಸಾಹಿತ್ಯವಾಗದು. ಈ ಮನೋವೈಶಾಲ್ಯ—ಈ 'ಪ್ರಗತಿ'—ಸಾಹಿತ್ಯದ ಶೀಲ. ಈ ಕಣ್ಣನ್ನು ಕೊಡದಿರುವುದು— ಈ ಅಂತಃಕರಣವನ್ನು ಮೀಟದಿರುವುದು.—ಹೀಗೆ "ಹೃದಯಸಂವಾದಿ"ಯಾಗದಿರುವುದು ನಿರಂತರ ಸಾಹಿತ್ಯವಾಗದು. ಸಾಹಿತ್ಯದ ಈ ಶೀಲವನ್ನನುಲಕ್ಷಿಸಿಯೇ ಮ್ಯಾಥ್ಯೂ ಅರ್ನಾಲ್ಡನು "ಸಾಹಿತ್ಯವು ಜೀವನದ ವಿಧಾಯಕ ವಿಮರ್ಶೆ" ಎಂದೂ ಟಿ. ಎಸ್. ಈಲಿಯೆಟ್‌ನು— "The Poetry of people takes its life from the peoples' speech and in turn gives life to it and represents the highest point of consciousness" ಎಂದೂ ಹೇಳಿರುವುದು.

"ಪಾಪಮಿದು ಪುಣ್ಯಮಿದು ಹಿತರೂಪಮ್ ಇದು" ಎಂದು ಕಾವ್ಯೋದ್ದೇಶವನ್ನು ಹೇಳಿದ ನೃಪತುಂಗನಿಂದ ಮೊದಲುಗೊಂಡು ಕನ್ನಡ ಕವಿಗಳಾದರೂ ಈ ಲಕ್ಷ್ಯದ ವಿಶಾಲಾರ್ಥವನ್ನು ಪೂರ್ಣವಾಗಿ ಬಿಟ್ಟುಸಾಗಿಲ್ಲ. ಅಲ್ಲಲ್ಲಿ ಅಲಂಕಾರ-ಧ್ವನಿಗಳಿಗೆ ಪ್ರಾಶಸ್ತ್ಯ ಸಂದಿರಬಹುದು ನಿಜ—ಆದರೆ ಮೂಲವಿಗ್ರಹದ ಅರಿವು ಅವರಿಗಿದೆ. ಪಾಪ-ಪುಣ್ಯದ ಅರ್ಥ "ಧರ್ಮ"ದ ಕಡೆಗೆ ಹೆಚ್ಚು ಒಲವನ್ನು ತೋರಿಸಿರಬಹುದಾದರೂ ಈ "ಹೃದಯಸಂವಾದಿ" ತತ್ವದ ಅರಿವು ಅವರಿಗೆ ತುಂಬಾ ಇದೆ. ಅಲ್ಲದೆ ಆ ಆ ಕಾಲದ ವಿಮರ್ಶಾಸೂತ್ರಗಳನ್ನೂ ನಾವು ಅಷ್ಟು ಅನಾದರವಾಗಿ ಕಾಣುವ ಕಾರಣವಿಲ್ಲ ಇಂದಿನ ನಮ್ಮ "ಸೂಟು" ನಾಳೆ 'ಸಂಪ್ರದಾಯ'ವಾಗಬಹುದು—ಅಥವಾ ಈಗಾಗಲೇ ಆಗಲೂ ಹತ್ತಿದೆ. ಮೊಮ್ಮಗನಿಗೂ ಅಜ್ಜನಾಗುವ ಕಾಲ ಇರದೆ ಇಲ್ಲ.

ಈ ಕಾವ್ಯಕಲ್ಪನೆಯನ್ನು ತಿಳಿದುಕೊಂಡು ನಮ್ಮ ಕವಿಗಳು ಪಡೆದ ಸಿದ್ಧಿಯನ್ನೂ ನೋಡಬಹುದು

ಕನ್ನಡ ಸಾಹಿತ್ಯವು ಪರಂಪರೆಯ ಮಠ. ಅದೇ ಮೂಲರಾಮ ದೇವರ ಆರಾಧನೆ, "ನಾಯಕನನ್ಯನಾಗೆ ಕೃತಿ ವಿಶ್ರುತವಾಗದು" ಎನ್ನುವ ಅದೇ ಪಲ್ಲವಿ, ಅದೇ ಕೊಳಚೆ ನೀರೆ 'ಸ್ವಾಮಿ ಪುಷ್ಕರಿಣಿ' ಎಂಬ ಕಲ್ಪನೆ,— ಎನ್ನುವವರೆಗೂ ಅಭಿಪ್ರಾಯ ಹೋಗಿದೆ. ಆವೇಶವನ್ನುಳಿದು ಬರಿಯ ತಾತ್ತ್ವಿಕವಾಗಿ ನೋಡುವುದಾದರೆ, ಕನ್ನಡ ಕವಿಗಳ ಪ್ರಯೋಗಗಳಾದರೂ 'ಪ್ರಗತಿ'ಪರವಾಗಿ ಸಾಗಿವೆಯೆಂಬುದನ್ನು ಕಾಣುತ್ತೇವೆ.

ಪ್ರತಿಯೊಬ್ಬ ಕವಿಯೂ ತಾನು 'ವಿನೂತನ' ಕವಿಯೆಂದೂ, ತಾನು ಹೊಸದನ್ನು ಯತ್ನಿಸುತ್ತಿದ್ದಾನೆಂದೂ ಹೇಳಿಯೇ ಇದ್ದಾನೆ. ಕನ್ನಡ ಭಾಷೆಯಲ್ಲಿಯ ಪ್ರಯೋಗಗಳ ವಿಷಯವು ನಮಗೆ ಉಪಲಬ್ಧವಾದ ಮೊದಲ ಗ್ರಂಥದಿಂದಲೇ ದೊರಕುತ್ತದೆ ಹಳೆ-ಹೊಸದರ ತಿಕ್ಕಾಟವನ್ನೂ, ಸರಿ-ತಪ್ಪುಗಳ ನಿರ್ಣಯಸ್ಥಾನವನ್ನೂ— ಅಲ್ಲಿಂದಲೇ ನಾವು ಕಾಣಬಹುದು. ನೃಪತುಂಗನು ತನ್ನ ಕಾಲದಲ್ಲಿ ಕನ್ನಡವನ್ನು ಪೊಲಗಿಡಿಸಿದವರ ಬಗ್ಗೆ ಹೇಳುವುದು ಹೀಗೆ:

"ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಮ್ ಎಂದೆ ಪಟಗನ್ನಡಮಂ ಪೊಲಗಿಡಿಸಿ ನುಡಿವರ್ ದೇಸಿಯುಲ್ಲದೆಂದು ಅಱಿದಿರ್ದುಂ." ದೇಸಿಯೂ ಆಗದೆ "ಮಾರ್ಗ"ಯೂ ಆಗದೆ ಬಂದ ಕೆಲವು ಪ್ರಯೋಗಗಳನ್ನು ನೃಪತುಂಗನು ಕಂಡಿರಬೇಕು. ಇಲ್ಲಿಯ ಪ್ರಯೋಗದ ಬಗ್ಗೆ ಅವನಿಗೆ ಒಪ್ಪಿಗೆಯಿಲ್ಲದಿದ್ದರೆ ಮತ್ತೊಂದೆಡೆಗೆ ಪ್ರಗತಿಪರವಾಗಿ ಬಂದ ಕೆಲವು ಹೊಸ ಛಂದೋರೂಪಗಳನ್ನು ಹೇಳುತ್ತಾನೆ—

"ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮ್ ಎಂದು ಈಗಡಿನ ನೆಗಳ್ತೆಯ ಕಬ್ಬದೊಳ್ ಒಡಂಬಡಂ ಮಾಡಿದರ್—" ಹತ್ತನೆಯ ಶತಮಾನದ ರನ್ನನಿಗೆ "ಆರಾತೀಯ ಕವೀಶ್ವರರು" ತೋರಿಸದೆ ಇದ್ದ ಶೌರ್ಯವನ್ನು ತೋರಿಸಿದ ಹೆಗ್ಗಳಿಕೆಯಷ್ಟೇ ಅಲ್ಲದೆ, ತನ್ನ 'ಮಾರ್ಗ'ದಲ್ಲಿ 'ಪೊಸದೇಸಿ'ಯನ್ನು ಸೇರಿಸಿದ ಹೊಸ ದೃಷ್ಟಿಯಿದೆ. ಅಷ್ಟೇ ಅಲ್ಲ, ತಾನು ಪ್ರಗತಿಪರ ನೂತನನಾದರೂ ಪ್ರಾಚೀನರ ಒರೆಗೆ ನಿಲ್ಲುವ ಧೈರ್ಯವಿದೆ.

"ಪುರಾಣ ಕವಿಪುಂಗವರ್ ಒಳ್ಳಿದರ್; ಈಗಳ್ ಇಲ್ಲ ಸತ್ಕವಿಗಳ್ ಎನಲ್ಕೆ ಬೇಡ—" ಇದು ಅವನ ಆಹ್ವಾನ. ಹನ್ನೊಂದನೆಯ ಶತಮಾನದ ನಾಗಚಂದ್ರನಿಗೆ, ಕಾವ್ಯಚ್ಛಲದಿಂದ ಉಪದೇಶವನ್ನಿತ್ತು "ಅಖಿಲ ಧರ್ಮಂಗಳಂ ಧರ್ಮಪಥ ಪ್ರಸ್ಥಾನದೊಳ್ ಯೋಜಿಸಿದ" ಪರಮಕವಿಗಳು ಪೂಜ್ಯರಾದರೂ, ತನ್ನ ಕಾವ್ಯವು "ಆದ್ಯರ ಅದ್ಯತನ"ವಾಗಿ ಮೆರೆಯುವುದೆಂಬ ವಿಶ್ವಾಸವಿದೆ.

ವಚನಕಾರರಲ್ಲಂತೂ ವಸ್ತು, ನಿರ್ವಹಣ, ಭಾಷೆ, ಉಪಮೆ, ಎಲ್ಲವೂ ನೂತನಮಾರ್ಗದುವು.

"ಅತಿ ಗಂಭೀರಂ ಕಾವ್ಯಂ; ನೀರಸರ್ ಅರಿವಂತೆ ಏನಿದು ತಾರೆಲೆಯೇ? ಬೀದಿವಾಡೆ? ನೆರೆವಿಯ ತುಮುಕೆ?" ಎಂದು ಗಿರಿಜಾಕಲ್ಯಾಣವನ್ನು ಬರೆದ ಹರಿಹರನಂತೂ 'ಅಟ' ಕುಳದ ಗೊಡವೆಗೆ ಕೂಡ ಹೋಗಿಲ್ಲ. ೧೩ನೆಯ ಶತಮಾನದ ರಾಘವಾಂಕನ ಕಾವ್ಯ "ಪೊಸಕಾವ್ಯಕನ್ನಿಕೆ"; ಷಟ್ಪದಿಯ ಪ್ರಥಮ ಪ್ರಯತ್ನ. "ನಡೆವರೆಡಹದೆ ಕುಳಿತರೆಡಹುವರೆ?—" ಇದು ಅವನ ಸಾಹಿತ್ಯದೃಷ್ಟಿ.

೧೭ನೆಯ ಶತಮಾನದ ಲಕ್ಷ್ಮೀಶನಂತೂ ಹಳೆಯದೆಲ್ಲ ಹೊನ್ನು ಹೊಸದು ಕಸವೆನ್ನುವವರಿಗೆ ಚೆನ್ನಾಗಿ ಬುದ್ಧಿ ಹೇಳಿದ್ದಾನೆ. "ಮುನ್ನ ಕಬ್ಬಗಳನುಸುರಿದರ ಲಕ್ಷಣಮಲ್ಲದೆಯು ಪೆರತೆನಗೆ ಸಲ್ಲದು" ಎಂದು ಪೂರ್ವಕವಿಗಳನ್ನು ಕೃತಜ್ಞತೆಯಿಂದ ನೆನೆದರೂ, 'ವಿನೂತನ' ಕವಿತೆಯನ್ನು ಜರೆವವರ ವೃತ್ತಿ ಅವನಿಗೆ ಸೇರದು:

"ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗೆ ಇನಿದಾಗೆ ಸವಿಯದೆ, ಪುಳಿವಿಳಿದು ರಸಮನೆ ಕಿಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊರತೆ? ....ವಿನೂತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಪೇಳ್ದವನೊಳ್ ಆವ ದೂಷೆಯಂ? ಜಾಣರ್ ಇದನರಿದು ಮತ್ಸರವನುಳಿದು ಆಲಿಸುವುದು—" ಇದು ಅವನ ಪ್ರಾರ್ಥನೆ.

ಕನ್ನಡ ಕವಿಗಳ ಈ ಉದ್ದೇಶಗಳೆಲ್ಲ ಬರಿಯ ಗಾಳಿಯ ಮಾತಾಗಿಯಾಗಲಿ ಫಲ ಪಡೆಯದ ಮನೋಬಯಕೆಯಾಗಿ ಆಗಲಿ ಉಳಿಯಲಿಲ್ಲ.

ಸ್ಥೂಲವಾಗಿ ಕನ್ನಡ ಸಾಹಿತ್ಯಚರಿತ್ರೆಯನ್ನೇ ನೋಡಿದರೆ, ಕಾಲ ಕಾಲಕ್ಕೆ ಹೇಗೆ ವಸ್ತು ಮತ್ತು ವಿವರಣೆ ಬೇರೆ ಬೇರೆಯಾಗುತ್ತ ಸಾಗಿವೆ ಯೆಂಬುದನ್ನು ಕಾಣುತ್ತೇವೆ.

೧೦–೧೧ನೆಯ ಶತಮಾನದ ತೀರ್ಥಂಕರರ ಚರಿತ್ರೆಗಳು ಜನರ ಮನಸ್ಸನ್ನು ಹಿಡಿಯುವೆಂದು ಕಂಡಾಗ, ಜನರ ಲೋಪ-ದೋಷಗಳನ್ನು ಬಿಚ್ಚು ಮಾತಿನಲ್ಲಿ ನೇರವಾಗಿ ಹೇಳುವ 'ವಚನ' ಪದ್ಧತಿ ಬಳಕೆಯಲ್ಲಿ ಬಂದಿತು.

ವಚನಕಾರರಿಗೆ ಕಥೆ ಬೇಕಿಲ್ಲ; ವಸ್ತು ಬಂದ ಹಾಗೆ ಬಟವಡೆ ಮಾಡುತ್ತಾರೆ; ಎಲ್ಲವೂ ಸ್ಪಷ್ಟ ನುಡಿ.

ಹಣದ ಕುರುಡುಸೊಕ್ಕಿನ ಬಗ್ಗೆ ಅವರ ಮಾತು ಹೀಗೆ!—"ಹಾವ ತಿಂದವರ ನುಡಿಸಬಹುದು; ಗರ ಹೊಡೆದವರ ನುಡಿಸಲು ಬಹುದು: (ಆದರೆ) ಸಿರಿಗರ ಹೊಡೆದವರ ನುಡಿಸಲು ಬಾರದು!" ಜಾತಿಗಳ ಬಗ್ಗೆಯೋ? ಅವರ ಸ್ಪಷ್ಟವಾದ ಅಭಿಪ್ರಾಯ ಸಿದ್ಧವೇ ಇದೆ.

"ಕಾಸಿ ಕಂಬಾರನಾದ ಬೀಸಿ ಮಡಿವಾಳನಾದ; ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ; ಕರ್ಣದೊಳ್ ಜನಿಸಿದರುಂಟೇ ಜಗದೊಳಗೆ?"

ಜನರ ಮನೆಮಾತಿನಲ್ಲಿ ಅವರವರ ಜೀವನ ಸೂತ್ರಗಳನ್ನು ಅವರವರ ಹೊಸ್ತಿಲವರೆಗೆ ಒಯ್ದು ಮುಟ್ಟಿಸಿ ಬಂದರು.

"ಕಾಯಕವೇ ಕೈಲಾಸ" "ಅಯ್ಯಾ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ" "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ........ಇದೇ ಅಂತರಂಗ ಶುದ್ಧಿ ಇದೇ ಬಹಿರಂಗಶುದ್ಧಿ!" "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ; ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ!"—ಎಲ್ಲವೂ ಬಿಚ್ಚುಮಾತು. ವಚನಕಾರರಿಗೆ ತತ್ತ್ವ ಹೇಳಲಿಕ್ಕಾಗಲಿ, ಸುಳಿ ತೆಗೆಯಲಿಕ್ಕಾಗಲಿ ಕಥೆ ಬೇಕಿಲ್ಲ. ಬಣ್ಣದ ಥಳುಕು ಅನವಶ್ಯ.

೧೩-೧೪ನೆಯ ಶತಮಾನದಲ್ಲಿ ಈ ರೀತಿಯ ಮಾತು ತೀರ ಗದ್ಯಮಯವೆನಿಸಿದಾಗ, ಕಲಾಮಯ ರೀತಿ ಪುನಃ ಅಸ್ತಿತ್ವದಲ್ಲಿ ಬಂದಿತು. ೧೪ ೧೫ನೆಯ ಶತಮಾನಗಳ ವೈದಿಕ ಕಥೆಗಳು, ೧೬–೧೭ರ ವೈದಿಕ ಮತ್ತು ಶಿವ ಶರಣರ ಗ್ರಂಥಗಳು ಕನ್ನಡದಲ್ಲಿ ಅವಿರತವಾಗಿ ನಡೆದ ನೂತನ ಪ್ರಯತ್ನಗಳನ್ನು ತೋರಿಸುತ್ತವೆ.

ಚಾಮರಸನಂಥವರಿಗಂತೂ "ದೇಗುಲವೆ ಮಾತಾಡುವಂದದೊಳ್" ಬರಿಯ ಗುಹಾಧ್ವನಿಯ ಕಾವ್ಯವನ್ನು ಬರೆಯದೆ ಹೊಸದನ್ನು ಸೃಷ್ಟಿಸುವ ಆಶೆ:

"ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ"

—ಇದು ಅವನ ಕಾವ್ಯದ ವಸ್ತು. ವಿವರಣೆಯ ದೃಷ್ಟಿಯಿಂದಲೂ ೧೦-೧೧ನೆಯ ಶತಮಾನದ ಸಂಸ್ಕೃತ ಭೂಯಿಷ್ಠ ಚಂಪೂಶೈಲಿ, ೧೨ನೆಯ ಶತಮಾನದ ತಿಳಿಗನ್ನಡ ವಚನ ರೀತಿ, ೧೩–೧೪ರ ಹಾಡುಗಬ್ಬ, ೧೫ರ ಷಟ್ಪದಿ ಪ್ರಾಧಾನ್ಯತೆ, ೧೬–೧೭ರ ಅನೇಕ ಪ್ರಯೋಗಗಳು—ಅನೇಕ ಬದಲಾವಣೆಗಳನ್ನು ಸ್ಥೂಲವಾಗಿ ನಾವು ಗುರುತಿಸುತ್ತೇವೆ

೧೭ನೆಯ ಶತಮಾನದ ಸರ್ವಜ್ಞನಂತೂ ಅನೇಕ ವಿಧದಲ್ಲಿ ಕ್ರಾಂತಿ ಪುರುಷ. ವಸ್ತು, ರೀತಿ, ಶೈಲಿ, ಛಂದಸ್ಸು, ವ್ಯಕ್ತಿತ್ವ—ಎಲ್ಲವೂ ಅವನಲ್ಲಿ ಹೊಸವು. ಅವನಿಗೂ ಸಮಾಜದಲ್ಲಿಯ ದಂಭ, ಅಹಂಕಾರ, ಅಜ್ಞಾನ, ಆಲಸ್ಯ, ಪರಾವಲಂಬನವೃತ್ತಿ—ಎಳ್ಳಷ್ಟೂ ಸೇರವು. "ನಾಯಕನನ್ಯನಾಗೆ ಕೃತಿ ವಿಶ್ರುತಮಾಗದೆಂದು" ಹೇಳಿದ ನಾಗಚಂದ್ರನ ರಾಮಾಯಣದ ಕಲ್ಪನೆಗೂ ಸರ್ವಜ್ಞನ ಕಲ್ಪನೆಗೂ ಅಜಗಜಾಂತರ! "ಭಾರತಕೂ ಭಾರತಮವಾಗಿ" ಬೆಳೆದು ಬಂದ ಮಹಾಭಾರತದ ಬಗ್ಗೆಯೂ ಅವನಿಗೆ ಅಷ್ಟೇ ಪುರಸ್ಕಾರ. ಹೆಸರುಗಳನ್ನುಳಿದರೆ ಆ ಕಥೆಗಳಲ್ಲಿ ಇರುವ ವಿಷಯ ಎಷ್ಟರಮಟ್ಟಿಗೆ ಸರ್ವಜನ ಸಮ್ಮತವೆಂದು ಅವನ ಸಂಶಯ:

"ಹಾದರದ ಕಥೆಯನ್ನು
ಸೋದರರ ವಧೆಯನ್ನು
ಆದರಿಸಿ ಪುಣ್ಯಕಥೆಯೆಂದು
ಕೇಳುವರು—ಈ ಮಾದಿಗರ ನೋಡು!"

ಇದು ಅವನ ವಿಮರ್ಶೆ. ಸರ್ವಜ್ಞನ ಈ ವಿಮರ್ಶೆಯ ವಿತರಣೆಯಲ್ಲಿ ಬ್ರಾಹ್ಮಣ, ಜಂಗಮ, ಜೈನ—ಎಲ್ಲರೂ ತಮ್ಮ ತಮ್ಮ "ಹವಿರ್ಭಾಗ"ವನ್ನು ಪಡೆಯುತ್ತಾರೆ............

ಅವನಿಟ್ಟುಕೊಂಡ ಛಂದಸ್ಸು ಕೂಡ ಪ್ರಗತಿಪರವೇ.

ಕರಸ್ಥಲದ ನಾಗಿದೇವನ "ತ್ರಿವಿಧಿ"ಗಳಲ್ಲಿಯಂತೆ ಈವರೆಗೆ ಬಹು ಮಟ್ಟಿಗೆ ಬರಿಯ ತಾತ್ತ್ವಿಕ ಚರ್ಚೆಗಳ ವಾಹಕವೇ ಆಗಿದ್ದ ತ್ರಿಪದಿ, ಮೊದಲಸಲ ಸರ್ವಜ್ಞನಲ್ಲಿ ಸಾಹಿತ್ಯಸ್ಥಾನವನ್ನು ಪಡೆಯುತ್ತದೆ.

ಸರ್ವಜ್ಞನ ಮಾತಿನ ರೀತಿಯೂ ಬಹುಮಟ್ಟಿಗೆ ಜನರ ನುಡಿಯಿಂದಲೇ ಬಂದುದು.

"ಬೆಳ್ಳುಳ್ಳಿ ಪೊಡೆದಿಹರೆ ಹೋಳಪ್ಪ ತೆರನಂತೆ"
"ತುಪ್ಪವಾದಾ ಮೇಲೆ ಹೆಪ್ಪನೆರೆದವರುಂಟೆ?"

ಇವು ಅವನ ಅಲಂಕಾರಗಳು........

ಸರ್ವಜ್ಞನ ಕಾವ್ಯದ ವಸ್ತುವೋ?........ಅದು ಜೀವನದ "ವಿಧಾಯಕ ವಿಮರ್ಶೆ". ಅಲ್ಲಿ ಹೊಡೆತವೂ ಇದೆ, ಹೊಗಳಿಕೆಯೂ ಇದೆ.

ಒಕ್ಕಲಿಗರು, ಕಾರ್ಮಿಕರು, ಪತಿತರು—ಎಲ್ಲರೂ ಇವನ ಕಾವ್ಯನಿಕಷದ ಒರೆಗೆ ನಿಲ್ಲುತ್ತಾರೆ. ಒಕ್ಕಲಿಗನು ಅವನ ಪ್ರಕಾರ ಮಾನವ್ಯದ ಪ್ರಥಮ ಆವಶ್ಯಕತೆ. ಅವನ ವಿದ್ಯೆ: "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯು ಮೇಲು." ಅವನಿಂದಲೇ ಜಗದ ಅಸ್ತಿತ್ವ:

"ಭಂಡಾರ ತುಂಬಿ ನೀ-
ಭಂಡಿಯಲಿ ಹೇರುವರೆ
ಮಂಡಲವನಾಳಿ ಮೆರೆಯುವರೆ
ಒಕ್ಕಲನು ಕೊಂಡಾಡಬೇಕು"

ಆತ್ಮಜ್ಞಾನವಿಲ್ಲದೆ ಬರಿಯ ಬಾಹ್ಯಾಡಂಬರಗಳನ್ನು ಇಟ್ಟುಕೊಂಡವರಿಗೆ ಅವನಲ್ಲಿ ಪುರಸ್ಕಾರವಿಲ್ಲ.

"ಪಕ್ಷಕೊಂದುಪವಾಸ, ಪುಕ್ಕಟೆ ಶ್ರೀತುಲಸಿ, ಸಿಕ್ಕಿಸಿಕ್ಕಿದಲಿ ಹರಿನಾಮ"—ಇದು ಸ್ವರ್ಗದ ದೃಢವಾದ ದಾರಿಯಲ್ಲ.

ಸರ್ವಜ್ಞನು ತೀರ ನಿಷ್ಪಕ್ಷಪಾತ ಕವಿ. ಮಾನವ್ಯ ಅವನಿಗೆ ಮುಖ್ಯವೇ ವಿನಾ ಅದರ ವಿಭಾಗ ಕೃತಕ; ಜಾತಿ ಧರ್ಮಗಳು ಮಾನವನಿರ್ಮಿತ. "ಕೂಳು" ದೊರೆತಮೇಲಿನ ವಿಷಯ:

"ಕೂಳಿಂದ ಕುಲ ಬೆಳೆದು
ಬಾಳಿಂದ ಬಲ ಬೆಳೆದು

ಕೂಳು ನೀರುಗಳ ಕಳೆದರಾ ಕುಲಗಳನು
ಕೇಳ ಬೇಡೆಂದ! ”

ಎಂತಲೇ ಅವನದು ಬರಿಯು “ಉಫೇ” ಪಂಥವಲ್ಲ. ಹಾಗಾದರೆ ಇಷ್ಟು ದಿನ ರಾಜರನ್ನು ಹೊಗಳಿ ‘ಸಂಪ್ರದಾಯಶರಣ’ವೆನಿಸಿಕೊಂಡ ಸಾಹಿತ್ಯವು, ಮತ್ತೊಂದು ವೈಗಳ್ಳ ಬಡತನವನ್ನು ಕೂಡ ವರ್ಣಿಸುವ ಇಂದು ಬರಿಯು ಸಂಪ್ರದಾಯದ ಕಂದರಕ್ಕೆ ಕಾಲಿಟ್ಟೀತು. ಕಾರ್ಮಿಕರ ಬಗ್ಗೆ ಇರುವ ಯಾವ ಕೃತಿಯುಷ್ಟೇ ವೈಗಳ್ಳ ಕೂಲಿಯುನ್ನು ವರ್ಣಿಸುವ “Load of wood”ವೂ “ಪ್ರಗತಿಶೀಲ ಸಾಹಿತ್ಯ”. ಸೆಲ್ಲಿಮುಂಡಾಸುಗಳ ಹೃದಯದ ಸ್ಪಂದನವೂ ಚಿಂದಿಯುನ್ನು ಧರಿಸಿದ ಹೃದಯದ ಸ್ಪಂದನವೂ ತೀರ ಭಿನ್ನವಾಗವು. ಮಾನವ್ಯ ಅನಂತವಾಗಿ ಒಂದೇ ಆಗಿದೆ ಎಂತಲೇ ಸರ್ವಜ್ಞನು ಈ ವ್ಯಕ್ತಿಗಳ ದೋಷಗಳನ್ನು ಹೇಳಿದ್ದಾನೆ:

“ಅಕ್ಕಸಾಲೆಯು ಮಗುವು
ಚಿಕ್ಕದೆಂದೆನಬೇಡ
ಚಿಕ್ಕಟವು ವೈಯು ಕಡಿವಂತೆ ಚಿಮ್ಮಟವ-
ನಿಕ್ಕುತಲೆ ಕಳುವ”

ಮಗು ಕೂಡ ತಾಯಿಯು ಹೊಟ್ಟೆಯಲ್ಲೇ ಈ ವಿದ್ಯೆ ಕಲಿತಿದೆ.

ಗಾಣಿಗನೂ ಹಾಗೇ:—

“ಗಾಣಿಗನು ಈಶ್ವರನ
ಕಾಣನೆಂಬುದು ಸಹಜ” (ಯಾಕೆಂದರೆ)
“ಏಣಾಂಕಧರನು ಧರೆಗಿಳಿಯಲವನಿಂದ (ಕೂಡ) ಗಾಣವಾಡಿಸುವ.”

ಒಟ್ಟಾರೆ ಮಾನವನ ಬೌದ್ಧಿಕ, ಆತ್ಮಿಕ ಮತ್ತು ದೈಹಿಕ ಪ್ರಗತಿಗೆ ಸರ್ವಜ್ಞನ ಕಾವ್ಯವು ತುಂಬಾ ಆಹಾರವನ್ನು ಒದಗಿಸಿಕೊಡುತ್ತದೆ. ಅವನ ದೃಷ್ಟಿ ನೂತನ; ರೀತಿ ನೂತನ:

“ಅಪ್ಪ ಹಾಕಿದ ಗಿಡವು
ಒಪ್ಪುತ್ತಲಿರುತಿರಲು
ತಪ್ಪಿಲ್ಲವೆಂದು ಅದನೇರಿ
ಮಗನು ಉರುಳಿಕ್ಕಿಕೊಳ್ಳುವನೆ?”

ಇದು ಅವನ ಜೀವನ ದೃಷ್ಟಿ; ಮಾತಿನ ನಿರ್ವಾಕ್ಷೆಣ್ಯ. ಪ್ರಾಚೀನ ಕನ್ನಡ ಸಾಹಿತ್ಯವು ಸಂಪ್ರದಾಯಶರಣವೆನ್ನುವ ಆಕ್ಷೇಪಕ್ಕೆ ಸರ್ವಜ್ಞನೊಬ್ಬನೇ ಉತ್ತರ ಸಾಕು.

ಈಚೆಗೆ ಮುದ್ದಣನ ಕಾವ್ಯದಲ್ಲಿ ಕೂಡ, ವಸ್ತು, ಕಾವ್ಯೋದ್ದೇಶ, ಕಾವ್ಯಪ್ರಾರಂಭ, ಶೈಲಿ, ವರ್ಣನೆ ಇವೆಲ್ಲದರ ಬಗ್ಗೆಯೂ ಹೊಸ ದೃಷ್ಟಿಯನ್ನು ಕಾಣಬಹುದು.

ಹೀಗಾಗಿ ವಸ್ತು, ರೂಪ, ನಿರ್ವಹಣ, ಶೈಲಿ, ಆತ್ಮಿಕ ಮತ್ತು ಭೌತಿಕ ಬೆಳವಣಿಗೆ ಇವುಗಳ ದೃಷ್ಟಿಯಿಂದ ಕನ್ನಡ ಕವಿಗಳು ಹೇಗೆ ಕಾಲಕಾಲಕ್ಕೆ ಮುಂದುವರಿದಿದ್ದಾರೆಂಬುದನ್ನು ನಾವು ಮನಗಾಣಬಹುದು.... ಒಂದೇ ನೆಲದಲ್ಲಿ ನಾಲ್ಕಕ್ಕೆ ಕಡಿಮೆಯಾಗದಷ್ಟು ಧರ್ಮತತ್ತ್ವಗಳಿಗೆ ಪೋಷಣೆಯಿತ್ತ ನಾಡಿನ ನೀರು ಕೊಳಚೆಯಿರದು ನೆಲ ಸಾಂಪ್ರದಾಯಿಕವಾಗದು. ನಾಡಿನ ಹಿರಿಯ ಕವಿಗಳ ಹೆಸರನ್ನೇ ತೆಗೆದುಕೊಂಡರೆ ಸಾಕು....ಅವರವರ ಕಾವ್ಯವಸ್ತು, ರೀತಿ ಕಣ್ಣೆದುರಿಗೆ ಕಟ್ಟುತ್ತದೆ ಪಂಪ, ರನ್ನ, ಬಸವೇಶ್ವರ, ಕುಮಾರವ್ಯಾಸ, ಲಕ್ಷ್ಮೀಶ, ಸರ್ವಜ್ಞ, ಮುದ್ದಣ—ಚಂಪೂ, ನಾಟ್ಯಕಾವ್ಯ, ವಚನ, ಭಾಮಿನಿ, ವಾರ್ಧಕ, ತ್ರಿಪದಿ, ಗದ್ಯ–ಕಣ್ಣೆದುರಿಗೆ ಮೆರವಣಿಗೆ ಸಾಗುತ್ತವೆ. ತೀರ್ಥಂಕರ, ವೈದಿಕನಾಯಕ, ಸಮಾಜಸತ್ತ್ವ, ಭಕ್ತಿ, ಕಥೆ, ವಿಮರ್ಶೆ—ವಸ್ತುವಿನ ವೈವಿಧ್ಯ, ವಿಕಾಸ, ಪ್ರಗತಿಗೆ ಎಡೆ–ತಡೆಯಿದೆಯೇ? ಇಟ್ಟ ಹೆಜ್ಜೆ ತೀರ ನಾವು ಅಪೇಕ್ಷಿಸುವಂತೆ ಇರದಿರಬಹುದು; ಆದರೆ ಅತಿಯಾಗಿ ಅಪೇಕ್ಷಿಸುವುದೂ ಪೀಕಾಕ್ (Peacock) ಅವರು ಹೇಳಿದಂತೆ ಒಂದು ರೋಗವಾದೀತು!

"To expect too much is a disease in the expectant for which human nature is not responsible."

ಈ ರೀತಿ ನೋಡಿದರೆ ಪ್ರಗತಿ ಕನ್ನಡ ಕಾವ್ಯಕ್ಕೆ ಅತಿಥಿಯಲ್ಲ; ಅದು ಕಾವ್ಯದ ಒಡನಾಡಿ. ಸ್ವಲ್ಪ ದುಡುಕಿ ಹೇಳಬಹುದಾದರೆ ಪ್ರಗತಿಯೇ ಕನ್ನಡ ಕಾವ್ಯದ ಪರಂಪರೆಯೇನೋ ಎನಿಸುತ್ತದೆ. ಪ್ರತಿ ಕವಿಯೂ ಒಂದು ಮಾರಾದರೂ ಮುಂದುವರಿಯಲು ಯತ್ನಿಸಿದ್ದಾನೆ:

ಸಾಹಿತ್ಯದಲ್ಲಿಯ ಪ್ರಗತಿ ಹಳಗನ್ನಡಕ್ಕಷ್ಟೇ ನಿಂತು ಹೊಸಗನ್ನಡದಲ್ಲಿ ಬರಿಯ ಮತಗಳಿಗೂ ಅವುಗಳ ಹೆಗ್ಗಣಗಳಿಗೂ ಆಶ್ರಯ ಕೊಟ್ಟದೆ

ಯೆಂಬುದೂ ಬಿರುಸುನುಡಿ. "**ಪಾವನ ಪಾವಕ**" "**ಪಾರಸಿಕರು**" "**ಅಶ್ವತ್ಥಾಮನ್**" ದಂತಹ ವೀರ 'ಗ್ರಾಂಥಿಕ' ಪ್ರಯೋಗಗಳು ಅಲ್ಲಲ್ಲಿ ಇರಬಹುದಾದರೂ, ಹೊಸಗನ್ನಡ ಸಾಹಿತ್ಯದ ಮೂಲಸ್ಫೂರ್ತಿ ತಾಯ್‌ನೆಲದಿಂದ ಬಂದಿದೆ. ಇಂದು ಕವಿ ಜಾಗೃತನಾದಷ್ಟು ಯಾವ ಕಾಲದಲ್ಲೂ ಆಗಿರಲಿಲ್ಲ. ಹೊರಗಿನ ಬಿಸಿಲು-ಬೆಳಕುಗಳನ್ನು ನೋಡಿದ್ದಕ್ಕೆ ಇಂದಿನ ಸಾಹಿತ್ಯದ ರೂಪವೈವಿಧ್ಯಗಳೇ ಸಾಕು. ಕಾದಂಬರಿ, ಕಥೆ, ಭಾವಗೀತ, ಪ್ರಬಂಧ, ವಿಮರ್ಶೆ, ಶಾಸ್ತ್ರೀಯ ವಿಷಯ, ಚರಿತ್ರೆ— ಎಲ್ಲವೂ ಈ ಹೊಸದೃಷ್ಟಿಯನ್ನೂ ಜಾಗೃತಿಯನ್ನೂ ತೋರಿಸುತ್ತವೆ.

ಪುರಾಣ ಕಾವ್ಯವು ಇಂದು ಬಹುಮಟ್ಟಿಗೆ ಪ್ರದರ್ಶನದ ವಸ್ತುವಾಗಿದೆ. ಪಾಶವೀನರಮೇಧ, ಶೃಂಖಲಿತ ಭಾರತ, ಕಂಗೆಟ್ಟ ಕನ್ನಡ, ಬಡವರ ಬಾಳು, ಪತಿತರ ಪಾಡು, ರೈತರ ಗೋಳು, ಕಾರ್ಮಿಕರ ಕಳವಳ—ಎಲ್ಲವೂ ಸಾಹಿತ್ಯದಲ್ಲಿ ಅಭಿವ್ಯಕ್ತಿ ಪಡೆದಿವೆ ಸಮಾಜದ ಮಧ್ಯಮವರ್ಗದಿಂದಲೇ ಹೆಚ್ಚಾಗಿ ಸಾಹಿತಿಗಳು ಬಂದದ್ದರಿಂದ, ಸ್ವಾಭಾವಿಕವಾಗಿ ಮಧ್ಯಮವರ್ಗದ ವಿಮರ್ಶೆಯೇ ಹೆಚ್ಚಾಗಿ ಕಂಡುಬರುತ್ತದೆ

ಈ ವರ್ಗದಲ್ಲಿಯ ಸಮಾಜದ ದಂಭ-ದುರಾಚಾರಗಳ ಉಚ್ಚಾಟಕರಾಗಿ **ಶ್ರೀರಂಗ, ಕೈಲಾಸಂ, ಕಾರಂತರು** ಸಿದ್ಧರಿದ್ದಾರೆ. ಆತ್ಮವಿಲ್ಲದೆ ಜನಿವಾರದ ಸರ್ಟಿಫಿಕೇಟಿನಿಂದಲೇ ಸ್ವರ್ಗಕ್ಕೆ ಟಿಕೇಟು ಹಚ್ಚಿನಿಂತ ತಾತಾಚಾರಿ, ಮುನಸಿಪಾಲಿಟಿ ಯಶಸ್ಸಿಗಾಗಿ ಯಾವುದಕ್ಕೂ ಸಿದ್ಧರಿದ್ದ ರಾಯರು, ಯಮನಿಗೂ ಮದ್ದತು ಕೇಳುವ ರೋಗಿ, ಕಲಿತು ಹೊಟ್ಟೆಗಿಲ್ಲದೆ ಸರ್ಕಸಿನ ಪ್ರದರ್ಶನವಸ್ತುವಾಗಿ ಹೊಟ್ಟೆಹೊರೆಯುವ 'ಸರಸ್ವತಿ', ನಿರಾಹಾರದ ಗೋಳು —ಎಲ್ಲವೂ ಸಮಾಜದ ಕಲ್ಮಷವನ್ನು ಹೊರಗೆಳೆಯುತ್ತಿವೆ. 'ಈ ಭೂಮೀ ಮೇಲೆ ಇರುವುದಕ್ಕೆ ನಾವು ದೇವರಿಗೆ ಕೊಡುವ ಬಾಡಿಗೆ ಎಂದರೆ ನಾಲ್ಕು ಜನಕ್ಕೆ ಉಪಯೋಗ ಬೀಳುವುದು' ಎಂದು **ಗುಂಡು**ವಾಣಿ.

ಕಾದಂಬರಿ ಪ್ರಪಂಚದಲ್ಲಂತೂ ಮಧ್ಯಮವರ್ಗದ ಸಾವುನೋವುಗಳಲ್ಲದೆ ರೈತರ ಮತ್ತು ಕಂಗೆಟ್ಟವರ ಬಾಳೂ ಬಂದಿದೆ ಕಾರಂತರ 'ಸೂಳೆಯ ಸಂಸಾರ,' 'ಚೋಮನ ದುಡಿ' 'ಬೆಟ್ಟದ ಜೀವ'— ಬೇರೆ ಬೇರೆ ಜೀವನದ ಚಿತ್ರಗಳು. ಇನ್ನೂ ಅನೇಕ ಉದಾಹರಣೆಗಳನ್ನು ಹೇಳಬಹುದು.

ಲಘುಕಥಾಪ್ರಪಂಚದಲ್ಲೂ ಕೂಡ ಈ ಕಂಗಾಲದ ಬೆಂಕಿಯ ನಾಲಗೆಯ ದೃಶ್ಯ ಕಂಡುಬರುತ್ತದೆ. ನಿಜ; ಕನ್ನಡ ಸಣ್ಣಕತೆಗಳಲ್ಲಿ ಪ್ರೀತಿಯ ವಿಷಯ ಹೆಚ್ಚಾಗಿ ಬಂದಿರಬಹುದು, ಅದೂ ಸ್ವಾಭಾವಿಕ; ಮಾನವ ಸಹಜ. ವಿಶ್ವಮೋಧದ ಮೂಲಕವಾಗಿಯೆ ಹೆಂಡಿರನ್ನೂ ಮದುವೆಯನ್ನೂ ತೀರ ಬಿಟ್ಟುಬಿಟ್ಟ ಉದಾಹರಣೆಯನ್ನು ಕೇಳಿಲ್ಲವಷ್ಟೇ ? ಅಂಥ ಕಥೆಗಳು ಇನ್ನೂ ನಿಯಮದ ಅಪವಾದಗಳು. ಹಾಗೆ ನೋಡಿದಲ್ಲಿ ಎಂತಹ ಆಘಾತ-ಪ್ರತ್ಯಾಘಾತಗಳು ಒದಗಿದರೂ ಅಗಾಧವಾಗಿ ಪ್ರೇಮಮಯವಾಗಿ ಸಾಗಿರುವುದೇ ಜೀವನದ ಗೂಢವೆಂದು ಕಾಣುತ್ತದೆ. ಪರಮಾತ್ಮನು ಮಾನವನ ಹೃದಯದ ಆಳವನ್ನಲ್ಲದೆ ಉದ್ವೇಗಗಳನ್ನು ಮೆಚ್ಚನೆಂದು ಮಹಾಕವಿ ಮಿಲ್ಟನ್ ಹೇಳಿದ್ದಾನೆ. ಜೀವನವೂ ಹಾಗೇ ಎಂದು ಕಾಣುತ್ತದೆ. ಅನಂತ ವಾಹಿನಿಯಲ್ಲಿ ಇಂಥ ವಿಪ್ಲವಗಳು ಅಲ್ಲೋ ಇಲ್ಲೋ ನೊರೆಯಾಗಿ ಹುಟ್ಟಿ, ಒಂದು ಕ್ಷಣ ತೆರೆಯ ಹೆಡೆಯಲ್ಲಿ ಆಡಿ, ಪುನಃ ಲಯಹೊಂದುವ ಹಾಗೆ ಕಾಣುತ್ತವೆ. ಕೊನೆಗೆ ನಿಲ್ಲುವುದು ಪುನಃ ಮಾನವೀಯತೆಯ ಮೂಲ ಭಾವನೆಗಳೇ ಹೊರತು ಬುದ್ಧಿಯ ಈ ನೆಳಲು-ಬೆಳಕಾಟವಲ್ಲ. ಹಾರ್ಡಿ ಕವಿಯು ಇಂತಹ ಒಂದು ಸಂದರ್ಭದಲ್ಲಿಯೇ ಒಂದು ಸುಂದರವಾದ ಭಾವಗೀತೆಯನ್ನು ಬರೆದಿದ್ದಾನೆ. ಮಹಾಯುದ್ಧದ ಆರ್ಭಟೆ ನಿಂತು ಶಾಂತಿ ತನಿಮಳೆಯಾಗಿ ಸುರಿದಾಗಿನ ವರ್ಣನೆಯಿದು :

" Yonder a maid and her wight
Come whispering by; wars annals
Will cloud into night ere their
Story die. "

ಅವನ ಪ್ರಕಾರ ಕೊನೆಗೆ ನಿಲ್ಲುವುದು— ಮಾನವ ಪ್ರಣಯ— ನಿರಂತರ ಪ್ರಣಯ—ಹೆಣ್ಣುಗಂಡಿನ ಚೆಲುವು. ಇದು ಶಿಲಾನಿಕ್ಷಿಪ್ತಾಕ್ಷರ; ಉಳಿದದ್ದೆಲ್ಲ ಜಲಲಿಪಿ. ಈ ದರ್ಶನ ಕೊನೆಯದಿರಲಿ ಬಿಡಲಿ; ಆದರೆ ಕನ್ನಡ ಕತೆಗಾರರಿಗೆ ಇದೊಂದರ ಮೂಲಕ ಮಾತ್ರ ಕಲ್ಪಿಸುವುದು ಸರಿಯಾಗಲಿಕ್ಕಿಲ್ಲ.

ಇದನ್ನುಳಿದರೂ ಬೇರೆ ಬೇರೆ ವರ್ಗದ ಜೀವನವನ್ನೂ ಸಮಸ್ಯೆಗಳನ್ನೂ ಕನ್ನಡ ಕತೆಗಳಲ್ಲಿ ಕಾಣುತ್ತೇವೆ. "ಗಂಗೆಯ ಗುತ್ತಿಗೆ" ಅಗಸರ ಜೀವನವನ್ನು ತೋರಿದರೆ, ದಿವಂಗತ ವಾಸುದೇವಾಚಾರ್ಯರ "ಮಲ್ಲೇಶಿಯ ನಲ್ಲೆ

ಯರು'' ಒಕ್ಕಲು ಜನರ ಹರ್ಷ-ಉತ್ಸಾಹಗಳನ್ನು ತೋರುತ್ತದೆ. 'ಛಪ್ಪರ ಬಂದ್' ಒಂದು ಸುಂದರ ಜೀವನಚಿತ್ರ. ಉಪಕಾರದ ಹೊರೆಯನ್ನು ತಾಳಲಾರದೆ ತನ್ನ ದಾರಿಯನ್ನೇ ಹಿಡಿಯಲು ಯತ್ನಿಸಿದ 'ಮೋಚಿ'ಯ ಕತೆ ಸುಂದರ ವಾಸ್ತವಚಿತ್ರವಾಗಿದೆ. ರಾಜಕೀಯ ಅಪರಾಧಕ್ಕಾಗಿ ಜೇಲಿಗೆ ಹೋಗಿ ಬಂದ ರಾಜ, ಸಂಪ್ರದಾಯವಂತ "ಮುದುಕಿ" ತಾಯಿಯ ಕಣ್ಣಲ್ಲಿ ಪತಿತ. ಆನಂದಕಂದರ ಕಥೆಗಳಂತೂ ಬಡತನದ—ರೈತರ—ಉದ್ದಿಮೆಗಾರರ ಉರಿಯುವ ಚಿತ್ರಗಳಾಗಿವೆ. ಇವರ ಬಹುಮಟ್ಟಿನ ಚಿತ್ರಫಲಕ ಇಂತಹ ರೈತರ ಸಮಸ್ಯೆಗಳಿಂದಲೇ ತುಂಬಿದೆ. ಅಕ್ಕಿ ಮತ್ತು ನೀರನ್ನು ಕೂಡಿಸಿಟ್ಟರೆ ಐದು ನಿಮಿಷದಲ್ಲಿ ಅನ್ನವಾಗಬಹುದಾದ ವಿಜಯಪುರ ಜಿಲ್ಲೆಯಲ್ಲಿ, ಹೊಟ್ಟೆ ಬೆನ್ನಿನ ಬೆನ್ನನ್ನು ಸೇರುವಂತೆ ಬೇರೊಬ್ಬರ ಸುಖಕ್ಕಾಗಿ ದುಡಿಯುತ್ತಿದ್ದ ಸಾತಮ್ಮ-ಲಿಂಗಪ್ಪನವರಿಗೆ ಗಡುವಿನಲ್ಲಿಯ ಎರಡು ಬಾಳೆಯ ಗೊನೆಗೂ ಅಧಿಕಾರವಿಲ್ಲವೇ ? ಅದೂ ಯಾವ ಕಾರಣಕ್ಕಾಗಿ ?.... ಅಥವಾ ಈ ಉರಿನಾಡಿನಲ್ಲಿ ರಾಯರಿಗೆ "ಮಾಲ್ಕಿಹಕ್ಕು" ದೊರೆತುದಾದರೂ ಎಂತು? "ಹಿಂದೆ ಎಂದೋ ಒಂದು ಕಾಲದಲ್ಲಿ ನಮ್ಮ ಪೂರ್ವಜರು ಸ್ವಾತಂತ್ರ್ಯಪ್ರಿಯ ದಾಯಾದಿಯೊಬ್ಬನನ್ನು ಸೆರೆಹಿಡಿದು ಕೊಟ್ಟದ್ದಕ್ಕಾಗಿ" ಹಾಗೆಯೇ "ಮಲ್ಲಮ್ಮನ ಮಹಾ ಭಾರತ''.— ಬಾಳ ದುಃಖಕ್ಕೆ ಯಾವಾಗಲೂ ಕರ್ಣಪರ್ವ ವಸಾನವೇ ಆಗಲಿ ಅಥವಾ ದ್ರೌಪದೀ ಪಂಭಪವೇ ಆಗಲಿ ಬೇಕಿಲ್ಲ; ಈ ದುರಂತತೆಯ ಕರಾಳ ಮುಖ ನಮ್ಮ ಜೀವನದ ಪ್ರತಿಕ್ಷಣದಲ್ಲೂ ಕೇಕೆ ಹಾಕಿ ಮುಂದು ನಿಲ್ಲುತ್ತದೆ. ಜೀವನದಲ್ಲಿ ಪ್ರತಿದಾರಿಯು ಕೊನೆಗೂ ಕಣ್ಣೀರ ಕಾಲುವೆಯನ್ನು ಕಾಣಲು ಕಷ್ಟಪಡಬೇಕಿಲ್ಲ.... ರುದ್ರಪ್ಪನ ಕೀಚಕವೃತ್ತಿಗೆ ಬೇಸತ್ತು, ಅವನ ಕಾಗೆದೃಷ್ಟಿಗಾಗಿ ನೊಂದು, ಗಂಡನಿಗೆ ಭಾರವಾಗದೆ ತನ್ನ ಬಾಳ ಕತೆಯನ್ನು ಮುಗಿಸಿದ ಚೆಲುವೆ-ಕಾಶಿಯ ಅತ್ತೆ ಮಲ್ಲಮ್ಮನದೂ ಒಂದು ಮಹಾಭಾರತವೇ. ಕೆಲಕಾಲದ ಹಿಂದೆ ಸಾರ್ವಭೌಮನಾಗಿ ಮೆರೆದ ಜಾಡರ ಜಾನಪ್ಪನು, ಗಿರಣಿಗಳ ಮೂಲಕ ತನ್ನ ಉದ್ಯೋಗವೆಲ್ಲ ನಷ್ಟವಾಗಿ ಅಲೆಯುವುದೂ ಒಂದು ಮನಕರಗಿಸುವ ಚಿತ್ರ. ಕಲೆಕ್ಟರರಾಗಬೇಕೆಂಬ ಹಂಬಲದಿಂದ ಕಿರುದಾರಿ ಹುಡುಕಿ ತೆಗೆದ ಲಾಂಛಪ್ರಹಾರದ ನಾಗೇಂದ್ರರಾಯರು ತಮ್ಮ "ಮಮತೆಯ ಮುಡಿಪನ್ನೇ'' ಸಲ್ಲಿಸಬೇಕಾಗುತ್ತದೆ. ಈ ಕ್ರೂರವಾದ ಅರ್ಪಣೆ ಇಂದಿನ ರಾಜಕೀಯದಲ್ಲಿ ಪಾಶವೀ ಜೀವನದ ಚಿತ್ರ

ವಾಗಿದೆ. ರಂಗನಾಥರ "ಕೂಟಪ್ರಶ್ನೆ" ನಿರುದ್ಯೋಗದ ಜ್ವಾಲಾಮುಖಿಯಾಗಿದೆ........ ಸಾವಿರಾರು ಉದಾಹರಣೆಗಳನ್ನು ಹೇಳಬಹುದು. ........

ಕವಿತೆಗಳಲ್ಲಂತೂ ಹೊಸದೃಷ್ಟಿ ತುಂಬಾ ಕಂಡುಬರುತ್ತದೆ. ಚಂಪು-ಷಟ್ಪದಿಗಳಿಂದ " ಶರಧಿಗೆ ಕೊಡದಿರು ಷಟ್ಪದಿಯ ದೀಕ್ಷೆಯನು " ಎಂದು ಸ್ವಚ್ಛಂದಛಂದಕ್ಕೆ ತಿರುಗಿದ ರಚನೆಯೇ ಈ ದೃಷ್ಟಿಯ ದೃಷ್ಟಾಂತವಾಗಿದೆ. "ಮಳೆ ಬೀಳುತಲಿತ್ತು" "ಸಾಂಬಶಿವಾಹರ" "ಪತಿತ"— ಇವೆಲ್ಲ ಪತಿತರ ಮತ್ತು ಭಿಕ್ಷುಕರ ಜೀವನವನ್ನು ಚಿತ್ರಿಸಿದರೆ, ಬೇಂದ್ರೆ ಅವರ "ತಿರುಕ" ನಮ್ಮನ್ನು ಆತ್ಮಾನ್ವೇಷಣೆಗೆ ಹಚ್ಚುತ್ತದೆ.

" ನಾಡಾಡಿ ಕತ್ತೆಗೆ ಹಾಳು ಗೋಡೆಯ ನೆರಳು.
ಬೀಡಾಡಿ ನಾಯಿಗೆ ಬೀದಿಗಾವಲಿ ನೀರು.
ತಿರುಕಾ—ಏ ತಿರುಕಾ—ಮನುಜನಾದರೆ ಏನು
ಮರುಕವಿಲ್ಲದ ಜಗವೆ ನರಕಾ—ಕಾಣೊ ನರಕಾ"

ಸಮಾಜದ ಅಂಧಪರಂಪರೆಗೆ ಸ್ಮಾರಕವಾಗಿ "ವಿಧವೆ" ಬೆಂದೊಡಲ "ಬಿಸಿಯುಸಿರು" ನಿಂತಿವೆ.

ಮಾನವನ ಅಸ್ತಿತ್ವವನ್ನೇ ಕೆಣಕುತ್ತಿರುವ ಕೂಳಿನ ಕಳವಳ " ಬಾಳಗರುಡಿ " "ಮನುವಿನ ಮಕ್ಕಳು" "ತುತ್ತಿನ ಚೀಲ"ಗಳಲ್ಲಿ ಕೆರಳಿ ನಿಂತಿದೆ. "ದೈವುಳ್ಳವರಿಗೆ ದಯವೇ ಇಲ್ಲಾ; ಹಸಿದವ ಬಲ್ಲ ಹಸಿವೆಯ ಶೂಲಿ...." ಪ್ರಚಂಡ ಘಂಟಾನಾದ! ಹತ್ತು ಅವತಾರಗಳ ಸಂಕಟಕ್ಕೆ ಸಿಕ್ಕಿಕೊಳ್ಳುವದಕ್ಕಿಂತ ಪರಮಾತ್ಮನು ಒಂದು ಅನ್ನದ ಮುದ್ದೆಯಾಗಿ ಬಂದಿದ್ದರೆ ಒಳಿತಾಗುತ್ತಿದ್ದಿಲ್ಲವೇ ಎಂದು ನಿತ್ರಾಣನಾದ ಪ್ರಾಣದೇವನ ಕೂಗು : "ಪ್ರಾಣದೇವನು ನಿತ್ರಾಣನಾಗುತ ಅಂದ: ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ—ಇನ್ನೂ ಬರಲಿಲ್ಲ! "

ತಗ್ಗಿದ್ದಲ್ಲಿ ಪುನಃ ನೀರು; ಧನವಿದ್ದಲ್ಲೆ ಪುನಃ ಲಕ್ಷ್ಮಿಯ ಲಾಸ್ಯ. ಅವರ ಮನೆ ಹೊಸ್ತಿಲ ದಾಟಲಾರದ ಕುಂಟು. ಇಂಥ ದೂಳಿಯ ಭಂಡಾರ ಬಡೆದುಕೊಂಡು ನಡೆಸಿದ ಈ ಉನ್ಮತ್ತ ನೃತ್ಯದ ಕೊನೆಗಾಲ "ಕುರುಡು ಕಾಂಚಾಣದ ಕವಿತಾವಸ್ತು." 'ಕಲ್ಕಿ'ಯೂ ಅಷ್ಟೇ.

"ನೇಗಿಲ ಯೋಗಿ" "ಭೂಮಿತಾಯಿಯ ಚೊಚ್ಚಿಲ ಮಕ್ಕಳು" ಇಂದಿನ ಕಂಗೆಟ್ಟ ರೈತರ ವರ್ಣನೆ

" ದಿನವೂ ಸಂಜೆಗೆ ಜೆವರಿನ ಜಳಕ
ಉಸಿರಿನ ಕೂಳಿಗೆ ಕಂಬನಿ ನೀರು
ಹೊಟ್ಟೆಯು ಹತ್ತಿತು ಬೆನ್ನಿನ ಬೆನ್ನು
ಸಾವಿನ ಬೆಳಕು ಕಾಣುವುದೆಂದೋ ? "

ಸಾಹಿತ್ಯದ ಇತರ ವಿಭಾಗಗಳಲ್ಲಿಯಂತೆಯೇ ಭಾರತದ ರಾಜಕೀಯ ಜೀವನದ ಬಗ್ಗೆಯೂ ಕನ್ನಡ ಕವಿಯು ತುಂಬಾ ಜಾಗೃತವಾಗಿದ್ದಾನೆ. 'ಶ್ರೀ' ಅವರು ಭರತಮಾತೆಯು ತಲೆಯೆತ್ತಿ ಬಾಳುವಂತಾಗಲೆಂದು ಹಾರಯಿಸಿದರೆ, ಬೇಂದ್ರೆ ಅವರ "೩೩ ಕೋಟಿ" ಪ್ರಜಾಭಾರವನ್ನು ವರ್ಣಿಸುತ್ತದೆ. ಎಲ್ಲ ಸ್ವಾತಂತ್ರ್ಯ ಪ್ರಯತ್ನಗಳನ್ನು ಸದೆಬಡೆದು ಸ್ಮಶಾನಶಾಂತಿಯನ್ನು ನೆಲಸಿದ ದೃಶ್ಯ "ನರಬಲಿ" ಯಲ್ಲಿದೆ.

" ಮುದಿ ತಂದೆಗಳೇ ಕೈ ಕೈ ತಾಳ
ಬಡೆಯಿರಿ ಬಾಜಿಸಿರಿ,
ಚಿಕ್ಕಮಕ್ಕಳೇ ಚೀರುಸನಾದಿಯ
ಅಕ್ಕ ತಂಗಿಯರೆ, ಅಳಲಿನ ಕೊಳಲ
ಊದಿರಿ ಉಸುರಿಸಿರಿ ! "

ಬಿಂಕದ ಪೊಳ್ಳು ಮೂಗನ್ನೇ ಮೆರೆಸಿ ನಲಿದ "ದಬ್ಬಾಳಿಕೆಗೆ" "ಅಂತರ ಪಿಶಾಚಿಯ" ಖಿಲ್ಲತ್ತು ಕೊಡಲಾಗಿದೆ :

" ನೆತ್ತಿಗೇರಿದ ಕಣ್ಣುಕುರುಡು ದಬ್ಬಾಳಿಕೆಯೆ,
ಪೊಳ್ಳು ಬಿಂಕದ ಮೂಗ ಮೇಲೆ ಮಾಡಿ
ಸಾವವರ ನರಳಿಕೆಯ ಕಿವುಡುಗೇಳಿ
ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ
ಅಂತರಪಿಶಾಚಿಯೇ !
ರಕ್ಷಕನು ಎಂದು ತಿಳಕೊಂಡ ರಾಕ್ಷಸನು ನೀನು. "

ಅವತಾರಕ್ಕೊಂದೊಂದು ಅಭಿಷೇಕ ಕಂಡರೂ, ಇನ್ನೂ ರಕ್ತಕ್ಕಾಗಿ ಹಾತೊರೆ ಯುವ ರಣಪಿಪಾಸೆ ಮೊದಲಗಿತ್ತಿಗೆ ತಾಯ್ತನವನ್ನರಿಯಲು ಬಿನ್ನವಿಸಲಾಗಿದೆ.

" ಮುನ್ನಿಲ್ಲ; ಇನ್ನಾರೆ ಮಕ್ಕಳ ದಿನವೆಂದು
ಮೂಡೀತು ಹೇಳವ್ವ ಬಿನ್ನವಿಸುವೆ....
ಎಂದು ಮಂಗಲ ನಿನ್ನ ದೇವಗರ್ಭಕೆ ತಾಯಿ ? "

........ಇನ್ನೂ ಉದಾಹರಣೆಗಳು ಬೇಕೆ ? ಇದೆಲ್ಲ "ಪ್ರಗತಿಪರ" ವಲ್ಲವೇ ? ಎಲೆಯಲ್ಲಿಯ ಅನ್ನ ಕಸಿದು ಹೋಗುತ್ತಿರುವಾಗ, ನಮ್ಮ ಕವಿಗಳೇನೂ ಕಣ್ಣುಮುಚ್ಚಿ ಗಾಯತ್ರಿ ಜಪಿಸುತ್ತ ಇಲ್ಲ........

ಹೀಗೆ ಅನೇಕ ಕವಿಗಳು ಪ್ರಚಲಿತ ವಿಷಯುಗಳ ಬಗ್ಗೆ ಬರೆದ ಹಾಗೆಯೇ ಮಾಸ್ತಿ-ಆನಂದರು ಆತ್ಮದ ವಿಕಾಸದ ಕತೆಗಳನ್ನು ಬರೆದಿದ್ದಾರೆ ಈ ರೀತಿಯ ಬರೆಹ ಸಾಕು ಎಂದ ದಿವಸವೇ ಸಾಹಿತ್ಯಕ್ಕೆ ಗುದ್ದಲಿ ಬಿದ್ದಿತೆಂದೇ ತಿಳಿಯ ಬೇಕು. ಯಾಕೆಂದರೆ ಮನುಷ್ಯನಿಗೆ ದೇಹದಷ್ಟೇ— ಅಥವಾ ಅದಕ್ಕೂ ಹೆಚ್ಚು—ಆತ್ಮವೂ ಇದೆಯೆಂಬುದನ್ನು ಮರೆಯಲಾಗದು. ಒಂದು ರೀತಿ ಯಿಂದ ನೋಡಿದರೆ ದೇಹದ ಕಷ್ಟಗಳೆಲ್ಲ ಆತ್ಮದ ಕೊಳೆತವೇ ಆಗಿರಬಹುದು. ಗಯಟೆ ಕವಿಯು ಹೇಳುವಂತೆ ಆ ಕೊಳೆತ ಸ್ಥಾನವನ್ನು ನಾವು ಸರಿಪಡಿಸಿ ಕೊಳ್ಳಬೇಕು. ಯುದ್ಧ ರೇಶನುಗಳ ಬಗ್ಗೆ ಕವಿತೆ ಬೇಕೆಂದು, "ಒಂದು ಕತೆ" "ಒಂದು ಹಳೆಯ ಕಥೆ" "ನಾನು ಕೊಂದ ಹುಡುಗಿ" "ಪೆನುಗೊಂಡೆಯ ಕೃಷ್ಣಮೂರ್ತಿ"—ಇಂತಹ ಕತೆಗಳನ್ನು ಮರೆಯಲಾಗದು. ಇವು ಹೃದ ಯದ ನಿತ್ಯ ನಂದಾದೀಪ. ಬರಿಯ ದೇಹ ಬೆಳೆದು ಆತ್ಮ ಕುಸಿದರೆ ನರಕ ಇನ್ನೂ ಸನಿಹ. 'ಪೈಲ್ವಾನ'ರ ಮೆದುಳಿನಂತಾದೀತು. ಆತ್ಮ, ದೇಹ ಒಂದೇ ಲತೆಯ ಎರಡು ಹೂಗಳು. ಜೀವನದ ಎರಡು ಕಣ್ಣು. ಯಾವ ಕಣ್ಣು ಹೋದರೂ ಅಷ್ಟೇ; ನೋವು ಸಹಿಸದು........ಒಂದು ಬೇಕು ಎಂದು ಹೇಳುವಲ್ಲಿ ಮತ್ತೊಂದು ಬೇಡ ಎನ್ನುವವರೆಗೆ ಬುದ್ಧಿಯನ್ನು ನೂಕಲಾಗದು. ಆ ಕಡೆಗೆ ಕಂದರವಿರಬಹುದು.

ನಿಜ; 'ಕಾರ್ಮಿಕ'ಜೀವನ ಇನ್ನೂ ನಮ್ಮಲ್ಲಿ ಅಷ್ಟಾಗಿ ಬಂದಿಲ್ಲ. 'ಕೂಲಿ' 'ತಪಸ್ವಿನಿ' 'ಛಪ್ಪರ್‌ಬಂದ'ದಂತಹ ಕೃತಿಗಳಿದ್ದರೂ ಗಿರಣಿ ಕೂಲಿ ಕಾರನ ಬಾಳು ಇನ್ನೂ ಅಷ್ಟಾಗಿ ಚಿತ್ರಿತವಾಗಬೇಕು. ಆದರೂ ಈ ವಿಮರ್ಶೆ ಯನ್ನು ಅತಿ ಅವಧಾರಣೆ ಕೊಟ್ಟು ಹೇಳುವಾಗ ಒಂದು ಮಾತನ್ನೂ ಲಕ್ಷ್ಯ ದಲ್ಲಿಡಬೇಕು— ಆ ಆ ತರದ ಜೀವನ ನಮ್ಮಲ್ಲಿ ಅಷ್ಟಾಗಿ ಬೆಳೆದ ಹೊರತು ಅಂತಹ ಸಾಹಿತ್ಯ ನಿರ್ಮಿತಿಹೊಂದದು. ಅದು ನಮ್ಮದೇ ಆಗಿ—ಅರಗಿ— ಬರಬೇಕು. ಗಿರಣಿ ಕೂಲಿಕಾರರ ಜೀವನ ನಮ್ಮಲ್ಲಿ ಬರಬೇಕಾದರೆ ಮೊದಲು ಅಂತಹ ಜೀವನ ನಮ್ಮಲ್ಲಿ ಬರಬೇಕು. ಆಮೇಲೆ ಅದರ ಅಭಿವ್ಯಕ್ತಿ. ಅಂತಹ

ಗಿರಣಿಗಳಾದರೂ ನಮ್ಮಲ್ಲಿ ಇರುವವೆಷ್ಟು ? ಉತ್ತರ ಕರ್ನಾಟಕದಲ್ಲಂತೂ ಹುಬ್ಬಳ್ಳಿ-ಗದಗುಗಳನ್ನುಳಿದರೆ ಹೆಚ್ಚುಕಡಿಮೆ ನರಸಿಂಗಸಾ, ಪಿಸ್ತೂಲ ಛಾಪಿನ ಫ್ಯಾಕ್ಟರಿಗಳೇ. ಊರಿಗೊಂದು ಹಣಮಪ್ಪ ಎಂದ ಹಾಗೆ ಹಿಟ್ಟಿನ ಗಿರಣಿ ಮಾತ್ರ ತಲೆಯೆತ್ತಿ ನಿಂತಿವೆ. ಎಂದಮೇಲೆ ಇಲ್ಲದ ಜೀವನವನ್ನು ವರ್ಣಿಸಬೇಕೆಂಬ ವಿಮರ್ಶೆ! ಹಿಂದಿನ ಅಷ್ಟಾದಶ ವರ್ಣನೆಗಳ ಸಂಪ್ರದಾಯ ವನ್ನು ಹಳಿದು ಹೊಸದೊಂದನ್ನು ನಿರ್ಮಿಸಿಕೊಂಡ ಹಾಗಾದೀತು, ಶೃಂಖಲೆ ಕೈಯಿಂದ ಕಾಲಿಗಿಳಿದಷ್ಟೇ! ಬೆಂಗಳೂರ, ಬೈಖಲಾ, ವರ್ಲಿಗಳ ಜೀವನ— ಮದಿಹಾಳ ಮಾಳಾಪೂರಗಳಲ್ಲಾಗಲೀ— ಅಖಂಡ ಕರ್ನಾಟಕದಲ್ಲಾಗಲಿ, ಎದ್ದುಕಾಣುವಷ್ಟು ಸಾರ್ವತ್ರಿಕವಾಗಿಲ್ಲ ಆ ರೀತಿ ಜೀವನ ಬೆಳೆದಾಗ ಸಾಹಿತ್ಯವೂ ಹಾಗೆ ಬೆಳೆದೀತು; ಬೆಳೆಯಬೇಕು. ಪ್ರಾದೇಶಿಕ ಅಗತ್ಯಗಳಿಗೆ ಮೊದಲು ಅಭಿವ್ಯಕ್ತಿ. ಮುಂಬಯಿ, ಅಹಮದಾಬಾದಗಳ ಸಮಸ್ಯೆ ತೀರ ನಮ್ಮ ಸಮಸ್ಯೆಯಾಗವು. ಮಲಬಾರ-ಹಿಲ್ಲಿನ ಭಿಕ್ಕುಲಾಲನಿಗೆ ಹಾಲು ಸಿಗುವುದು ಭಯ್ಯಾನಿಂದ ಎಂದುಮಾತ್ರ ಗೊತ್ತಿದ್ದರೆ, ಮದಿಹಾಳದ ಬಸಪ್ಪನಿಗೆ "ಟ್ರಾಂ" ಚಿತ್ರದಲ್ಲಿ ಮಾತ್ರ ಪರಿಚಿತ........ ಆದ್ದರಿಂದ ಗಿರಣಿ ತುಕಾರಾಮನ ಜೀವನವನ್ನು ಚಿತ್ರಿಸುವ ಮಾತ್ರಕ್ಕೇ, ನಾವು ನಮ್ಮ ಕಥಾ ನಾಯಕನನ್ನು ರೇಶನ್ ದಿವಸಗಳಲ್ಲಿ ಮುಂಬಯಿಗೆ ಓಡಿಸಿ ನರಳಿಸುವ ಕಾರಣವಿಲ್ಲ. ಹಾಗೆ ಮಾಡುವುದು ಸೂಳೆಗೇರಿಯ ವರ್ಣನಾಚಾಪಲ್ಯಕ್ಕಾಗಿ ರಾಘವಾಂಕನು ಹರಿಶ್ಚಂದ್ರನನ್ನು "ಉದ್ಧಾರ"ಮಾಡಿದ ಹಾಗಾದೀತು!........ ಜಾಗತಿಕ ಸಾಹಿತ್ಯದ ಯಾವ "ಪ್ರಗತಿಪರ" ಗ್ರಂಥವನ್ನು ನೋಡಿದರೂ ಇದೇ ಮಾತು ಕಂಡುಬರುತ್ತದೆ. ಇಂಗ್ಲಿಷ್ ಸಾಹಿತ್ಯದ "Trial of a Judge" ಆಗಲಿ, ಅಥವಾ ಆಧುನಿಕ ಅಮೇರಿಕೆಯ 'Manhattan Transfer' ವೇ ಆಗಲಿ, ಅಥವಾ ಸ್ಪೆನಿಶ್‌ದ "Seven Red Sundays" ಎಂಬುದೇ ಆಗಲಿ— ಎಲ್ಲವೂ ಆ ಆ ಜೀವನದ ತಾಯ್ನೆಲದಿಂದ ಅರಳಿದ ಹೂಗಳು.

ಹಿಂದಿನದೆಲ್ಲವೂ ಸರಿಯುಲ್ಲವೆಂಬ ಅಭಿಪ್ರಾಯವೂ ಹೊಂದದು. ಇತರ ಸಾಹಿತ್ಯಗಳಲ್ಲೂ ಕಂಡುಬಂದ ಈ ವೃತ್ತಿಯ ಬಗ್ಗೆ ಪ್ರೊ. ಸ್ಲೇಟರ್ ಅವರು ಒಳ್ಳೆಯ ಜಾಗ್ರತಿಯ ಮಾತನ್ನು ಹೇಳಿದ್ದಾರೆ. "Progressive literature is doomed if young writers and readers are going to be satisfied with any stuff written about the workers .. ...

any biography of Marx and Lenin will show how much they both loved the great authors of the past" (Progress in writing—Past and Present ಪು. ೯೨.)

ಒಟ್ಟಾರೆ, ನಮ್ಮ ಬೆನ್ನನ್ನು ನಾವೇ ತಟ್ಟಿಕೊಳ್ಳುವಷ್ಟು ನಾವು "ಪ್ರಗತಿಪರ"ರಾಗಿರದಿದ್ದರೂ, ಪ್ರಗತಿಯ ಅರ್ಥ ಕಾಲಕಾಲಕ್ಕೆ ಭಿನ್ನವಾಗುತ್ತ ನಡೆದಿದೆಯಾದರೂ, ನಾವೇನೂ ಮಠದ ಹೆಗ್ಗಣಗಳಾಗಿಲ್ಲವೆಂಬುದನ್ನು ಮಾತ್ರ ಅರಿತುಕೊಳ್ಳೋಣ. ವಿವಿಧ ಜೀವನ ಬೆಳೆದಾಗ ಆ ಆ ಸಾಹಿತ್ಯವನ್ನು ನಿರ್ಮಿಸೋಣ; ಮಗು ಹುಟ್ಟಿದಮೇಲೆ ಅರಿವೆ ಅಳತೆಯ ಕೆಲಸ ಬಹಳ ವೇಳೆ ಹಿಡಿಯಲಾಗದು; ಹೊಲಿಸಿ ಇಟ್ಟ ಅಂಗಿಗಾಗಿ ಕೂಸಿನ ಅಳತೆ ಹೆಚ್ಚುಕಡಿಮೆ ಮಾಡಲಾರೆವು. ಮೊದಲು ಜೀವನ ಬರಲಿ; ಆಮೇಲೆ ಅಂತಹ ಸಾಹಿತ್ಯ. ಮೊದಲು ಸಾಹಿತ್ಯ, ಅನಂತರ ವಿಮರ್ಶೆ; ಮೊದಲು ಕೃತಿ, ಅನಂತರ ಶಾಸ್ತ್ರ.



# ಕನ್ನಡದಲ್ಲಿ ವಿಚಾರಸಾಹಿತ್ಯದ ಅಭಾವ

ಜೀವನವು ಬುದ್ಧಿ ಮತ್ತು ಭಾವನೆಗಳ ಹಿತವಾದ ಹೊಂದಿಕೆಯಾದರೇ ಬಾಳು ಸಾಧ್ಯ. ಒಂದಿಲ್ಲದೇ ಮತ್ತೊಂದು ಪೂರ್ತಿಯಾಗದು. ಅಂತೆಯೇ ಜೀವನಕ್ಕೆ ಸಾಧನವಾದ ಸಾಹಿತ್ಯವು ಕೂಡ ಭಾವನಾಪೂರ್ಣವಾದಷ್ಟೇ, ಬುದ್ಧಿಪೂರ್ಣವೂ ಪ್ರಭಾವಶಾಲಿಯೂ ಆಗಿರುವುದು ಯುಕ್ತಿಯುಕ್ತವಾಗಿದೆ. ಜೀವನದಲ್ಲಿ ಬುದ್ಧಿ ಮತ್ತು ಭಾವನೆಗಳನ್ನು ಸ್ಪಷ್ಟವಾಗಿ ವಿಂಗಡಿಸಬಹುದಾದಂತೆ ಸಾಹಿತ್ಯದಲ್ಲಿ ಆ ರೀತಿ ವಿಂಗಡಿಸುವದು ಕಠಿಣಸಾಧ್ಯವಾದರೂ, ಸಹೃದಯರಿಗೆ ಎರಡೂ ರೀತಿಗಳ ಅರಿಕೆಯಾಗದಿರದು ಎಂತಲೇ ಶೈಲಿ ಬೈರನ್ನರಲ್ಲಿ ಭಾವನೆ ಹೆಚ್ಚೆಂದು ಹೇಳಿದರೆ, 'ಶಾ' 'ಇಲಿಯಟ್'ರಲ್ಲಿ 'ಬುದ್ಧಿ' ಹೆಚ್ಚೆಂದು ಹೇಳುವದು. 'ಶಾ'ನ ನಾಟಕಗಳೆಲ್ಲ ಇಂದಿನ ಜೀವನದಲ್ಲಿ ನಡೆದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಹೋರಾಟಗಳ ಉಷ್ಣತಾಮಾಪಕದಂತಿವೆ. ಇಂತಹ ಬರೆಹಗಾರರು ಬರಿಯ ಆರಾಮಕುರ್ಚಿಯ ಓದುಗರಿಗೆ ಬೇಸರವನ್ನು ತರಿಸಬಹುದು ನಿಜ; ಆದರೆ ಕೆಲವು ಜೀವಿಗಳಿಗಾದರೂ ಬರಿ 'ಆರಾಮಕುರ್ಚಿ'ಯ ಜೀವನ ಬೇಕಿಲ್ಲ.

ಕನ್ನಡ ಸಾಹಿತ್ಯದಲ್ಲೂ ಕೂಡ ಈ ಬುದ್ಧಿ ಮತ್ತು ಭಾವನೆಗಳ ಭೇದವನ್ನು ಬಹುಮಟ್ಟಿಗೆ ಕಾಣಬಹುದು ಲಲಿತಸಾಹಿತ್ಯದಲ್ಲಿ ಕನ್ನಡ ಕಾವ್ಯವು ಬಹುಮಟ್ಟಿಗೆ 'ಭಾವನಾಪ್ರಧಾನ' ವಾಗಿದ್ದರೂ 'ಮಂಕುತಿಮ್ಮನಕಗ್ಗ'ದಂತಹ ಕೃತಿಗಳಲ್ಲಿ ಭಾವನೆ ಮತ್ತು ಬುದ್ಧಿಯ ಸುಂದರವಾದ ಹೊಂದಿಕೆಯನ್ನು ಕಾಣುತ್ತೇವೆ.

ಹಲಕೆಲವು ಕಾದಂಬರಿಗಳು ಒಳ್ಳೆ ತಾತ್ವಿಕ ಚರ್ಚೆಯನ್ನೆತ್ತಿಕೊಂಡಿವೆ. ಕಲೆ ಮತ್ತು ಅದರ ಸ್ವರೂಪ, ನಾಡಿನ ದುರವಸ್ಥೆ ಮತ್ತು ಕಾರಣ ಪುರುಷನ ಬರವು, ದೇಶದ ರಾಜಕೀಯ ಮತ್ತು ಉದ್ವಿಗ್ನತೆ— ಇವೆಲ್ಲ ಸುಂದರವಾಗಿ, ಉಚಿತವಾಗಿ ಚರ್ಚಿಸಲ್ಪಟ್ಟಿವೆ. ಆದರೂ ಈ ಭಾಗದಲ್ಲೂ— ವಿಚಾರ-ಸಾಹಿತ್ಯ—ವಿಚಾರಪ್ರಚೋದಕ ಸಾಹಿತ್ಯ—ಇನ್ನೂ ಬೇಕು. T. S. Eliotನ

"Night—mare Abbey" ದಂತೆ, ಸಾಹಿತ್ಯ ಮತ್ತು ಸಾಹಿತಿಗಳ ನಿರ್ಮಾಣಕ ವಿಮರ್ಶೆಯನ್ನು ಕೊಡುವ ಗ್ರಂಥಗಳ ದಾರಿ ಕನ್ನಡಕ್ಕೆ ಇನ್ನೂ ದೂರ.... ಆ ನಾಡಿನ ಬೆಳಕು ಕೂಡ ಇನ್ನೂ ನಮ್ಮಲ್ಲಿ ಮೂಡಿಲ್ಲ; ಅಲ್ಲಿಯ ಒಂದು ಹಕ್ಕಿಯೂ ಈ ಕಡೆ ಮಾರ್ಗ ಬೆಳೆಸಿಲ್ಲ.

ಆದರೆ ಸಮಾಜದ ಪಡೆಗನ್ನಡಿಯಾದ ನಾಟಕಪ್ರಪಂಚದಲ್ಲಿ ಮಾತ್ರ ಹಲವಾರು ಲೇಖಕರಾದರೂ ತುಂಬಾ ವಿಚಾರಪೂರ್ಣವಾದ ಸಾಹಿತ್ಯವನ್ನಿತ್ತಿದ್ದಾರೆ. 'ಹರಿಜನ್ವಾರ' — 'ಸರ್ಕಸ್ಸಿನ ಸರಸ್ವತಿ' — 'ಪ್ರಪಂಚ ಪಾಣಿಪತ್ತು' — 'ನಿರಾಹಾರ'— ಇವೆಲ್ಲ ಇಂದಿನ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ನಡೆದ ಕ್ರಾಂತಿಯ ಫಲ. ಶ್ರೀರಂಗರ ಸಾಹಿತ್ಯ ಬಹು ಮಟ್ಟಿಗೆ ವಿಚಾರಪೂರ್ಣವಾದುದು. "ಲೆಕ್ಚರ ಕೊಡಲಿಕ್ಕೆ ಹೊರಟ ಕೈಲಾಸಂ ನಾಟಕ ಬರೆದರು; ನಾಟಕ ಬರೆಯ ಹೊರಟ ಶ್ರೀರಂಗರು ಲೆಕ್ಚರಿಗೆ ಪ್ರಾರಂಭಿಸಿದರು" ಎನ್ನುವುದು ಸ್ಥೂಲವಾದರೂ ಅಸತ್ಯವಾದ ಅಭಿಪ್ರಾಯವೇನೂ ಅಲ್ಲ. ಕನ್ನಡ ಜನತೆಯನ್ನು ಹೊಡೆದೆಬ್ಬಿಸಿ ಸತ್ವಯುತವಾಗಿ ವಿಚಾರ ಮಾಡಹತ್ತಿದ ಶ್ರೇಯಸ್ಸು. 'ಶ್ರೀರಂಗರ' ವಿಚಾರ ಸಾಹಿತ್ಯಕ್ಕಿರಲೇಬೇಕು

ಹಳಗನ್ನಡದಲ್ಲಿ ಕೂಡ 'ಕಾಂತಾ ಸಮ್ಮಿತತಯಾ' ಉಪದೇಶ ಮಾಡ ಹೊರಟ ಕನ್ನಡ ಕಾವ್ಯವು ಈ ಬುದ್ಧಿಯ ಅಂಶವನ್ನು ಕಾಯ್ದುಕೊಂಡೇ ಬಂದಿತು.

ಆದರೂ ಸಮಗ್ರ ಕನ್ನಡ ಸಾಹಿತ್ಯದ ಸಿಂಹಾವಲೋಕನವನ್ನು ಮಾಡಿದರೆ ಈ ವಿಚಾರ ಸಾಹಿತ್ಯದ ದಾಹ ಕಡಮೆಯಾಗದು. ನೆರೆಹೊರೆಯ ಮರಾಠಿ, ಗುಜರಾಥಿ ಸಾಹಿತ್ಯಗಳನ್ನು ನೋಡಿದರಂತೂ ಅದರ ಕೊರತೆ ತುಂಬಾ ಕಂಡುಬರುತ್ತದೆ.

'ಓಣಿಗೊಬ್ಬ ಕವಿ' ಎಂದು ಸಾಮಾನ್ಯರು ಗೇಲಿ ಮಾಡಬಹುದಾದರೂ, ಕನ್ನಡದಲ್ಲಿ ಬರಹಗಾರರ ಸಂಖ್ಯೆ ಇನ್ನೂ ಕಡಿಮೆ; ಗ್ರಂಥಗಳೂ ಕಡಿಮೆ. ನೆರೆಹೊರೆಯ ಸಾಹಿತ್ಯವನ್ನು ನೋಡಿದಾಗ ಈ ಕನಿಕರ ಇನ್ನೂ ಹೆಚ್ಚಾಗಿ ಎದ್ದು ಕಾಣುತ್ತದೆ. ಕಾವ್ಯದಲ್ಲಿ ಬೇಂದ್ರೆ, ಪುಟ್ಟಪ್ಪನವರ ಜೊತೆಗೆ ನಿಲ್ಲಬಹುದಾದ ಕವಿಗಣಬೇಕು; ನಾಟಕವಲ್ಲಿಯು ಹಳೆಯ 'ತ್ರಿಮೂರ್ತಿ'ಗಳ ಆರಾಧನೆಯ ಜೊತೆಗೆ ಹೊಸವಿಗ್ರಹಗಳು ಬರಬೇಕು. ಸೃಷ್ಟಿ ಸ್ಥಿತಿಗಳಾಗಿ

ಲಯಕ್ಕೆ ನಿಂತಂತಿದೆ ಕನ್ನಡ 'ತ್ರಿಮೂರ್ತಿ'ನಾಟಕಪ್ರಪಂಚ. 'ಎನ್ಕೆ' ಅವರ ಅನೇಕ ಗ್ರಂಥಗಳು ಇತ್ತೀಚೆಗೆ ಕೊರತೆಯನ್ನು ಪೂರೈಸಿದಂತೆ ಹೊಸಹುಟ್ಟು ಬರಬೇಕು. ಅದರ ಜೊತೆಗೆ ವಿಚಾರ ಸಾಹಿತ್ಯವಂತೂ ಇಮ್ಮಡಿಯಾಡಿ ಮುಮ್ಮಡಿಯಾಗಿ ಹುಟ್ಟಬೇಕು........

"ಶುದ್ಧ ವಿಚಾರ ಸಾಹಿತ್ಯದ" ಗ್ರಂಥಗಳಿಗಂತೂ ಕನ್ನಡದಲ್ಲಿ ತುಂಬಾ ಕಾರ್ಪಣ್ಯ. ಜಗತ್ತಿನಲ್ಲಿ ನಡೆದ ಅನೇಕ ಆಂದೋಲನಗಳ ವಿಷಯವಾಗಿ ಶಾಸ್ತ್ರೀಯವಾಗಿ—ಸತ್ವಯುತವಾಗಿ—ಹೇಳುವ ಉದ್ಗ್ರಂಥಗಳು ಕನ್ನಡದಲ್ಲಿ ತೀರ ಕಡಿಮೆ. "ನೇತಿ" "ನೇತಿ"ಯು ಕಡೆಗೇ ಕನ್ನಡದ ಮಾರ್ಗ. ನಾಡಿನಲ್ಲಿ ನಡೆದ ಪ್ರಚಂಡ ವಿಪ್ಲವಗಳ ವಿಷಯ ಕನ್ನಡದಲ್ಲಿ ಇನ್ನೂ ಮಾಸ ಪತ್ರಿಕೆಗಳಿಗೇ ಮೀಸಲು. ತತ್ತರಿಸುತ್ತಿರುವ ಸಾಮ್ರಾಜ್ಯವಾದ, ಹೊಸ ಹುಟ್ಟು ತೋರಿಸಿದ ಸಮತಾವಾದ, 'ರಾಯ್‌ವಾದ' ಜಾಗತಿಕ ವರ್ಣದ್ವೇಷ, ಸಮಾಜಸ್ವಾಸ್ಥ್ಯ, 'ಬಿವರಿಜ್-ಯೋಜನೆ', ಕರೆನ್ಸಿ—ಇವೆಲ್ಲ ಪ್ರಚಲಿತ ವಿಷಯಗಳ ಬಗ್ಗೆ ಕನ್ನಡದಲ್ಲಿ ಗ್ರಂಥಗಳೆಷ್ಟು? ಎಷ್ಟರ ಮಟ್ಟಿಗೆ ಕನ್ನಡ ವಿಚಾರ ಸಾಹಿತ್ಯ ಕನ್ನಡದಲ್ಲಿ ಜನರನ್ನು ಬಡಿದೆಬ್ಬಿಸಿದೆ? ಇದ್ದ ಗ್ರಂಥಗಳೋ ಬರಿಯ ಕೈಪಿಡಿಗಳ ಸಿಂಪಣಿಕೆಯಷ್ಟು........

ಈ ಅಂತರದೇಶೀಯ ವಿಷಯಗಳೂ ಹೋಗಲಿ; ಭಾರತದ ಆಂತರಿಕ ಸಮಸ್ಯೆಗಳ ಬಗ್ಗೆಯಾದರೂ ಇರುವ ಅಧಿಕೃತ ಮತ್ತು ಶಾಸ್ತ್ರೀಯ ಗ್ರಂಥಗಳೆಷ್ಟು? ಅಸ್ಪೃಶ್ಯತೆ, ಆಹಾರ ಸಮಸ್ಯೆ, ಆಹಾರ ನಿಯಂತ್ರಣದ ಕ್ರಮ, ಸಂಸ್ಥಾನಗಳ ಭವಿತವ್ಯ, ಗಾಂಧೀವಾದ ಮತ್ತು ಅಖಂಡ ಹಿಂದುಸ್ತಾನ ಈ ಬಗೆಯ ವಿಷಯಗಳ ಸಲುವಾಗಿ ಇರುವ ವಿವೇಚನಾತ್ಮಕ ಗ್ರಂಥಗಳಾದರೂ ಎಷ್ಟು? ಇವೆಲ್ಲವೂ "ಒಳಗೆ ಬರಬೇಕೋ ಬರಬಾರದೋ" ಎಂದು ಕನ್ನಡದ ಮನೆಯ ಮುಂದೆ ಸುಳಿಯುತ್ತಿರುವ ಆಗಂತುಕ ಅತಿಥಿಗಳು....ಅಷ್ಟೇ ಏಕೆ? ೧೮೫೭ರ ರಾಜ್ಯಕ್ರಾಂತಿ, ೧೯೪೭ರ ಸ್ವಾತಂತ್ರ್ಯಯುದ್ಧ—ಇವೆಲ್ಲ ಪುಸ್ತಕಕ್ಕೇನು ಕಡಮೆಯ ವಸ್ತುವೇ? ಇಂಗ್ಲೀಷಿನಲ್ಲಿ ಈ ವಿಷಯವಾಗಿ ಇರುವ ಗ್ರಂಥಗಳೆಷ್ಟು? ಆದರೆ ಕನ್ನಡದಲ್ಲಿ?........

ಅದೂ ಹೋಗಲಿ; ನಾಡಿನ ಪ್ರಸಿದ್ಧ ರಾಜಕಾರಣಿಗಳ ಶಾಸ್ತ್ರೀಯ ಮತ್ತು ಸತ್ವಯುತವಾದ ಗ್ರಂಥಗಳಾದರೂ ಎಷ್ಟು? "ಸತ್ಯಶೋಧನಮಾಲೆ" ಕಂದಾಡೆಯವರ "ನೆಹರೂ ಆತ್ಮ ಚರಿತ್ರೆ" ಗೋರೂರ ಮತ್ತು ಕೃಷ್ಣ

ಶರ್ಮರ ಗ್ರಂಥಗಳು—ಇವೇ ನಾಲ್ಕಾರು ಪುನಃ ಪುನಃ ಹೇಳಬೇಕಾದ ಗ್ರಂಥಗಳು. ಇಂದು ಕನ್ನಡ ರಾಜಕಾರಣಿಗಳ ವಿಷಯವಾಗಿಯೇ ಬರೆಯು ಬಹುದಾದಷ್ಟು ಸ್ವಾರ್ಥತ್ಯಾಗ ಕನ್ನಡ ನಾಯಕರಲ್ಲಿ ಕೂಡಿಲ್ಲವೇ?....ಇವೆಲ್ಲ ಕನ್ನಡವಿಚಾರಸಾಹಿತ್ಯಮಾಲೆಗೆ ಅವಶ್ಯ ಬರಬೇಕು.

ಹಾಗೆಯೇ ಭಾರತದ ಅನ್ನವನ್ನೇ ಉಂಡು, ಭಾರತದ ನೆರಳಿನಲ್ಲಿ ಆದರಾತಿಥ್ಯ ಹೊಂದಿ, ಭಾರತದಲ್ಲಿ ಐಷಾರಾಮವಾಗಿ ಸುಖಕೊಚ್ಚಿ, ಸ್ವದೇಶ ಗಳಿಗೆ ಮರಳಿದ ಎಷ್ಟು ಜನ ಪರಕೀಯರು ಭಾರತಕ್ಕೆ ಅನ್ಯಾಯ ಬಗೆದಿಲ್ಲ? ....ಮಿಸ್ ಮೇಯೋ, ಫಾದರ ದುಬಾ, ಬಿವರ್ಲಿ ನಿಕೋಲ್ಸ— ಒಬ್ಬರೇ ಇಬ್ಬರೇ—ಹಲವಾರು ಜನ ಈ ಸುರಿಗೆಯನ್ನು ಕ್ರೂರವಾಗಿ ಭಾರತದ ಬೆನ್ನಲ್ಲಿ ಇರಿದಿದ್ದಾರೆ. ಇಂಗ್ಲಿಷ್‌ನಲ್ಲಿಯಂತೂ ಹೆಚ್ಚು ಕಡಿಮೆ ಈ ಗ್ರಂಥಗಳು ಪ್ರಕಟವಾದ ಮರು ತಿಂಗಳಲ್ಲಿಯೇ ಪ್ರತಿಹೊಡೆತ ಬಂದಿದೆ. "Sister India", "Father India", ಲಜಪತರಾಯರ "Unhappy India", N. G. Jog ಅವರ "Judge or Judas?" K. L. Gauba ಅವರ 'Verdict on England"— ಎಷ್ಟೋ ಉತ್ತರಗಳು ಹುಟ್ಟಿಕೊಂಡುವು. ಇವೆಲ್ಲವುಗಳನ್ನು ಬರಿಯ ಭಾಷಾಂತರ ಮಾಡದೆ— ಎಲ್ಲವನ್ನೂ ಒಂದು ಗೂಡಿಸಿ ವಿಚಾರ ಪ್ರಚೋದಕವಾದ ಸಾಹಿತ್ಯವನ್ನು ನಿರ್ಮಿಸುವ ಅವಶ್ಯಕತೆ ಇಲ್ಲವೇ ?........ಇಂತಹ ವಿಚಾರ ಪ್ರಚೋದಕ ಸಾಹಿತ್ಯ ಕನ್ನಡಕ್ಕೆ ಅವಶ್ಯಬೇಕು.... "ಸತ್ಯ ಶೋಧನ ಪ್ರಕಟನಮಂದಿರ" "ಪ್ರಭಾತ ಸಾಹಿತ್ಯ ಮಾಲೆ," "ರಾಷ್ಟ್ರೀಯ ವಾಙ್ಮಯ" "ಮಿಂಚಿನ ಬಳ್ಳಿ," "ಜನತಾ ಸಾಹಿತ್ಯಗಳು"— ಈ ದಿಶೆಯಲ್ಲಿ ಅವಿರತವಾಗಿ ಪ್ರಯತ್ನ ಮಾಡುತ್ತಿವೆ. ಆದರೆ ಇಷ್ಟೇ ಸಾಲದು; ಬರಿಯ ಬೇಸಿಗೆಗೊಮ್ಮೆ ಹಾರಿಬಂದ ಒಂದೇ ಕೋಗಿಲೆಯ ಗಾನದಿಂದ ಸಂಗೀತ ತೃಷೆ ಪೂರ್ತಿ ತೀರದು.

ಅದೂ ಅಲ್ಲದೆ, ಈ ವಿಭಾಗದಲ್ಲಿ ಬರಿಯ ಭಾಷಾಂತರಗಳಿಂದಲೂ ಕೆಲಸ ಸಾಲದು. ಕನ್ನಡ ರಾಜಕಾರಣಿಗಳಲ್ಲಿ ಮೇಧಾವಿಗಳೂ ಲೇಖಕರೂ ಅನೇಕರಿದ್ದಾರೆ. ಕನ್ನಡ ಮುಟ್ಟಿದ ರಾಜಕೀಯದ ಮಡಿವಂತಿಕೆಯ ಕಾಲವೂ ಇಂದು ಸಂದು ಹೋಗಿದೆ. ಜನರ ನಾಯಕರು—ಅವಶ್ಯವಾಗಿ ಜನರ ವಾಣಿಯಲ್ಲಿ ಬೋಧವಾಗುವ ಹಾಗೆ ಹೇಳಬೇಕು; ಬರೆಯಬೇಕು. ರಾಜಕಾರಣಿಗಳ ಈ ಲೇಖನ ಸಂನ್ಯಾಸ ನಿಂತು, ಜನರಲ್ಲಿ ಹೆಚ್ಚಿನ ಜಾಗೃತಿ

ಉತ್ಸಾಹ— ಆತ್ಮೀಯತೆಗಳು ಬೆಳೆಯಬೇಕು. ಮರಾಠಿಯಲ್ಲಿ ಶ್ರೀ ಸಾವರಕರ್, ನ. ಚಿ. ಕೇಳಕರ್, ಸಾನೇಗುರುಜಿ ಅವರು— ಅವರು— ಗುಜರಾಥದಲ್ಲಿ ಕನಯಲಾಲ್ ಮುನಷಿ, ರಾಮನಾರಾಯಣ ಪಾಠಕ, ಅವರು ಮಾಡಿದ ಸೇವೆಯಂತೆ ಕನ್ನಡದಲ್ಲಿಯೂ ಸವ್ಯಸಾಚಿ ಸೇವೆ ಬೇಕು. ದೇಶವತ್ಸಲ ದಿವಾಕರ ಅವರು ಹಾಕಿದ "ಸತ್ಯಾಗ್ರಹ" ದ ದಾರಿ ಕನ್ನಡದ ಮುಂದಿನ ಆಶೆಯನ್ನು ಕುದುರಿಸಬೇಕು.

ರಾಜಕೀಯ ರಂಗವು ಈ ಸ್ಥಿತಿಯಲ್ಲಿದ್ದರೆ, ವಿಜ್ಞಾನದ ವಿಷಯವೂ ಅಷ್ಟೇ. ವಿಜ್ಞಾನವನ್ನು ಬಿಟ್ಟಿರಲಾಗದ ಇಂದಿನ ಜೀವನದಲ್ಲಿ ಈ ಬಗ್ಗೆ ಇರುವ ಶಾಸ್ತ್ರೀಯ ಗ್ರಂಥಗಳಾದರೂ ಎಷ್ಟು? ಪ್ರಾದೇಶಿಕ ಭಾಷೆಗಳಲ್ಲಿಯೇ ಎಲ್ಲ ವಿಷಯಗಳನ್ನು ಕಲಿಸಬೇಕೆಂದು ರಾಷ್ಟ್ರೀಯ ಸರಕಾರವು ಇಂದಿನ ಕಾಲದಲ್ಲಿ ವಿಚಾರ ಮಾಡುತ್ತಿರುವಾಗ, ಈ ಲಾಭವನ್ನು ಪಡೆಯುವ ಸಾಮರ್ಥ್ಯ ಕನ್ನಡಕ್ಕಿದೆಯೆ? ತಾನಾಗಿಯೇ ನಡೆದು ಬಂದ ಭಾಗ್ಯಲಕ್ಷ್ಮಿಗೆ ಬಾಗಿಲು ತೆರೆಯುವ ಪ್ರಜ್ಞೆಯಾದರೂ ನಮ್ಮಲ್ಲಿದೆಯೆ? ........ವಿಚಾರಿಸಬೇಕು........ಆದರೆ ಇಲ್ಲಿಯೂ ಪುನಃ ಅದೇ "ನಾಸ್ತಿ". ಮೈಸೂರು ವಿಶ್ವವಿದ್ಯಾಲಯದ ಹಲವು ಪ್ರಕಟನೆಗಳು, "ವಿಜ್ಞಾನಿಗಳ ಕಥೆಗಳು" "ವಿಜ್ಞಾನ ಮತ್ತು ಸಾಹಿತ್ಯ" "ನವಜೀವನ ಗ್ರಂಥ ಮಾಲೆಯ ಪ್ರಕಟನೆಗಳು"—ಇವುಗಳನ್ನು ಬಿಟ್ಟರೆ ಪುನಃ ಪೂರ್ಣ ವಿರಾಮ. ಇದಕ್ಕೆ ಕಾರಣವೇನೇ ಇರಲಿ—ಸಾಹಿತ್ಯಕರ ಅನಾಸ್ಥೆಯೇ ಇರಲಿ ಅಥವಾ ಈ ವಿಷಯಗಳನ್ನು ಬಲ್ಲ ಕನ್ನಡ ವಿದ್ವಾಂಸರ ಅನಾಸಕ್ತಿ ಮಡಿವಂತಿಕೆಗಳೇ ಇರಲಿ ಇಲ್ಲಿಯೂ ಈ ಸಾಹಿತ್ಯ ಬೆಳೆಯುವ ಅವಶ್ಯಕತೆ ಹೆಚ್ಚಾಗಿದೆ. ಹೆರವರಿತ್ತ ಅಮೃತವನ್ನಾದರೂ ಅರಗಿಸಿ ಕೊಳ್ಳುವ ಸಾಮರ್ಥ್ಯ ನಮ್ಮಲ್ಲಿ ಬರಲಿ!....

ರಾಜಕಾರಣ ವಿಜ್ಞಾನಹೋಗಲಿ; ಧಾರ್ಮಿಕರೆಂದೆನಿಕೊಂಡ ಕನ್ನಡರ ಧಾರ್ಮಿಕ ಸಾಹಿತ್ಯವಾದರೂ ನೆರೆಹೊರೆಯ ಪ್ರಾಂತಗಳ ಸ್ಪರ್ಧೆಗೆ ನಿಲ್ಲಬಹುದೇ? ನೋಡೋಣ ಭಾರತ—ಭಾಗವತ ಪುರಾಣಾದಿಗಳು ಭಾಷಾಂತರ ಹೊಂದಿದರೂ ವೇದ ಉಪನಿಷತ್ತುಗಳ ಸಮಗ್ರ ಭಾಷಾಂತರ ಇನ್ನೂ ಉಪಲಬ್ಧವಿಲ್ಲ. ಅದೂ ಇಲ್ಲದೆ ಇದ್ದಂಥ ಭಾಷಾಂತರಗಳ ಬಾಣಸಿಗತನಕ್ಕೇ ನಮ್ಮ ಬುದ್ಧಿ ಏಕೆ ನಿಲ್ಲಬೇಕು? ಈ ಎಲ್ಲ ಗ್ರಂಥಗಳನ್ನು ಓದಿ, ಅರಗಿಸಿ,

ಇವುಗಳ ಸ್ವಂತ ವಿವೇಚನೆಯನ್ನು ಮಾಡಿ, ವಿಮರ್ಶಾತ್ಮಕ ಸಾಹಿತ್ಯವನ್ನು ನಿರ್ಮಿಸುವ ಸಾಮರ್ಥ್ಯ ಕನ್ನಡಕ್ಕೆ ಇಲ್ಲವೇ?

ಮರಾಠಿಯಲ್ಲಿ ಲೋಕಮಾನ್ಯರ "ಗೀತಾರಹಸ್ಯ" ಸಿ. ವ್ಹಿ. ವೈದ್ಯರ "ಮಧ್ಯಯುಗೀನ ಭಾರತ" ಮತ್ತು ಚಿತ್ರಾವಶಾಸ್ತ್ರಿಗಳ "ಭಾರತೀಯ ಚರಿತ್ರಕೋಶ" ಇವಕ್ಕೆ ಸರಿದೊರೆ ಗ್ರಂಥಗಳು ನಮಗೆ ಬೇಡವೇ? ಕನ್ನಡದಲ್ಲಿ ಈ ದಿಶೆಯಲ್ಲಿ ಜನರಿಲ್ಲವೆಂದಲ್ಲ; ಆದರೆ ಕನ್ನಡದ ಬಗ್ಗೆ ಆದರ ಇನ್ನೂ ಅಲ್ಲಿ ಅಂಕುರಿಸಬೇಕು. ಮೈಸೂರು ವಿಶ್ವವಿದ್ಯಾನಿಲಯ, ಆಲೂರ ವೆಂಕಟರಾಯರು, ಹೊಸಕೆರೆ ಚಿದಂಬರಯ್ಯನವರು–ಇವೇಕೆಲವು ಹೆಸರು ಪುನಃ ಇಲ್ಲಿ ಹೇಳಲ್ಪಡಬೇಕು. ಅಲ್ಲದೆ, ಇನ್ನೂ ಒಂದು ದೃಷ್ಟಿಯಿಂದಲೂ ಕನ್ನಡದಲ್ಲಿ ಧಾರ್ಮಿಕ ವಿಚಾರಸಾಹಿತ್ಯ ಬೆಳೆಯಬೇಕು. ಅದೆಂದರೆ ಧಾರ್ಮಿಕ ಪರಿಭಾಷೆಯ ಕೋಶ ಮತ್ತು ಪೌರಾಣಿಕ ವ್ಯಕ್ತಿಗಳ ಬಗ್ಗೆ ಒಂದು ವಿಶ್ವಕೋಶ. ಕನ್ನಡವನ್ನು ಕಲಿಸಬೇಕಾದ ಅಧ್ಯಾಪಕರಿಗಂತೂ ಇದು ಬಿಡಲಾರದ ಕರ್ಮ; ಇಲ್ಲದ ತೊಂದರೆ. ಸಲ್ಲೇಖನ, ಸಿದ್ಧ ಶಿಲೆ, ಶಲಾಕಾ ಪುರುಷ, ಅಣುವೃತ, ದಾಸೋಹ, ಜಂಗಮ, ವಿಶ್ವಸ್ವರೂಪ— ಈ ಮೊದಲಾದ ಪಾರಿಭಾಷಿಕಗಳ ಬಗ್ಗೆ ಪುನಃ ನಾವು ಇನ್ನೂ ಆ ಗ್ರಂಥಗಳನ್ನು ನೋಡುವ ತೊಂದರೆ ತಪ್ಪಿಲ್ಲ. ಪಂಡಿತ ಪೂಜಾರ ಅವರ ಈ ಗ್ರಂಥ ಇನ್ನೂ ಇತರ ಗ್ರಂಥಗಳ ದಾರಿಕಾಯುತ್ತಿದೆ. ಜೈನ ಧರ್ಮದಸಲುವಾಗಿ ಶ್ರೀ ರಾಜರತ್ನಂ ಅವರು ಮಾಡಿದಸೇವೆ ಈ ರೀತಿಯಿಂದ ಅಮೋಘವಾಗಿದೆ. ಇವೆಲ್ಲವುಗಳ ವಿಷಯವಾಗಿ ನಿರ್ದುಷ್ಟ ಮತ್ತು ಶಾಸ್ತ್ರೀಯವಾದ ಕೋಶದ ಆವಶ್ಯಕತೆ ತುಂಬಾ ಇದೆ.

ಹಾಗೆಯೇ ಪೌರಾಣಿಕ ವ್ಯಕ್ತಿಗಳ ವಿಷಯವೂ ಅಷ್ಟೇ! ಕನ್ನಡದ ಅಭ್ಯಾಸದಲ್ಲಿ ನೂರಾರು ಇಂಥ ಹೆಸರುಗಳು ಬರುತ್ತವೆ. ಪೃಥು, ಪುರೂರವ, ದಧೀಚಿ, ನಾಗಾರ್ಜುನ—ಈ ಮೊದಲಾದ ವ್ಯಕ್ತಿಗಳು ಯಾರು? ಇವರ ಉಪಲಬ್ಧ ಜೀವನ ಚರಿತೆಯೇನು ? ಇವರ ಜೀವನದ ವೈಶಿಷ್ಟ್ಯಗಳಾವು ? ಯಾವುದಕ್ಕಾಗಿ ಇವರ ಹಿರಿಮೆ? ಇವರ ಉಲ್ಲೇಖನಗಳೆಲ್ಲಿ? ಹೆಚ್ಚಿನ ವಿವರಗಳಿಗಾಗಿ ಸಂದರ್ಭಗ್ರಂಥಗಳಾವು ?— ಈ ಎಲ್ಲ ವಿಷಯಗಳನ್ನು ಹೇಳುವ ಒಂದು ಬೃಹದ್ವಿಶ್ವಕೋಶ ತೀರ ಅವಶ್ಯ. ಇದಿಲ್ಲದೆ ಕನ್ನಡ ಅಭ್ಯಾಸ ಬಹುಮಟ್ಟಿಗೆ ಪ್ರಯಾಸಕರ; ಅಪೂರ್ಣ. "ಪುರಾಣನಾಮ ಚೂಡಾಮಣಿ"

ಕೆಲಮಟ್ಟಿಗೆ ಈ ಉದ್ದೇಶವನ್ನು ಯಶಸ್ವಿಯಾಗಿ ಸಾಧಿಸಿದೆ. ಇಂಥ ಪರಿ ಪೂರ್ಣ ಮತ್ತು ಸರ್ವಧರ್ಮ ಸಮನ್ವಿತ ಗ್ರಂಥಗಳು ಬೇಕು. ಮರಾಠಿಯಲ್ಲಿ "ಭಾರತೀಯ ಚರಿತ್ರಕೋಶ" ಆಗಿಹೋಯಿತು ಆದರೆ ಕನ್ನಡದಲ್ಲಿ?–

ಇಲ್ಲಿಗೆ ಕನ್ನಡ ವಿಚಾರಸಾಹಿತ್ಯದ "ನಾಸ್ತಿ"—ಯಾದಿಮುಗಿಯಲಿಲ್ಲ. ಕನ್ನಡದ ಸಾಮಾನ್ಯ ಓದುಗನಿಗೆ ಇನ್ನೂ ಅನೇಕ ಆವಶ್ಯಕತೆಗಳು ಕ್ಷಣ ಕ್ಷಣಕ್ಕೆ ಬೇಕೆನಿಸುತ್ತವೆ.

ಇವುಗಳಲ್ಲಿ ಸಾಹಿತ್ಯ ವಿಮರ್ಶೆಯನ್ನೇ ತೆಗೆದುಕೊಳ್ಳೋಣ. ವಿಮರ್ಶೆಯ ಬಗ್ಗೆ ಶುದ್ಧ ಮತ್ತು ಶಾಸ್ತ್ರೀಯವಾದ ಅನೇಕ ಗ್ರಂಥಗಳು ಬೇಕು. ಮಾಸ್ತಿ, ಬೇಂದ್ರೆ, ರಂಗಣ್ಣ, ಗೋಕಾಕ–- ಇವರ ಗ್ರಂಥಗಳ ಜೊತೆಗೆ ವಿಮರ್ಶೆಯ ಸ್ವರೂಪವನ್ನು ನಿರ್ದಿಷ್ಟವಾಗಿ ಹೇಳುವ ಇನ್ನೂ ಹೆಚ್ಚು ಗ್ರಂಥಗಳು ಬೇಕು.

ಅಲ್ಲದೇ ಬೇರೆ ಬೇರೆ ಕವಿಗಳ ಬಗ್ಗೆಯೂ ಒಳ್ಳೆಯ ವಿಮರ್ಶಾಗ್ರಂಥಗಳ ಆವಶ್ಯಕತೆ ಇನ್ನೂ ತುಂಬಾ ಇದೆ. ಪಂಪ, ನಾಗಚಂದ್ರ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ, ಮುದ್ದಣರಿಗೆ ದೊರೆತ ವಿಮರ್ಶೆ–ಪ್ರಶಸ್ತಿಗಳ ಭಾಗ್ಯ— ಇನ್ನೂ ಅನೇಕ ಕವಿಗಳಿಗೆ ದೊರೆಯಬೇಕು

ಆ ರೀತಿ ಇಂಗ್ಲೀಷಿನಲ್ಲಿಯ "Men of letters" ಮಾಲಿಕೆಯಂತೆ, ಪ್ರಮುಖರಾದ ಕನ್ನಡ ಕವಿಗಳ ಮಾಲಿಕೆಯೂ ಪ್ರಾರಂಭವಾಗಬೇಕು. ಪ್ರತಿಯೊಂದು ಗ್ರಂಥದಲ್ಲಿಯೂ ಆ ಆ ಕವಿಗಳ ಕಾಲ, ಉಪಲಬ್ಧ ಜೀವನ–ವೃತ್ತಾಂತ; ಗ್ರಂಥಗಳು; ಅವುಗಳ ಗುಣ ವಿಮರ್ಶೆ; ಅವುಗಳ ಸ್ಥಾನ ಮತ್ತು ಇತರ ಕವಿಗಳ ಮೇಲಾದ ಆ ಕವಿಯ ಪ್ರಭಾವ ಈ ಎಲ್ಲ ಅಂಶಗಳ ವಿವರಣೆ ಬೇಕು.

ಅದರಂತೆಯೇ "Age Series" ಮಾದರಿಯಲ್ಲಿ " ಯುಗಸಾಹಿತ್ಯ ಮಾಲಿಕೆ"ಯೂ ಅವಶ್ಯ. ಸರ್ವಾಗ್ರಹಿಯಾದ "Encyclopaedia Britannica" ಮತ್ತು ಆಧುನಿಕ ಗ್ರಂಥಕರ್ತರ ಬಗ್ಗೆ ಹೇಳುವ "Ox ford Companion to English Literature" ದಂತಹ ಗ್ರಂಥಗಳು ತುಂಬಾ ಉಪಕಾರಿಯಾಗಿವೆ.

ಹೀಗೆಯೇ ಕನ್ನಡದ 'ನಾಸ್ತಿ' "ದದಾತಿ"ಗಳು ಮುಗಿಯುವಂತಿಲ್ಲ. ಆಗಿದಷ್ಟು ಹೊರಡುವ ಬೇತಾಳದ ಹೊಟ್ಟೆಯಂತೆ ಕನ್ನಡದ ಅಭಾವ

ಹೊರಡುತ್ತಲೇ ಇದೆ. ಈ ಪ್ರಪಂಚಕ್ಕೆ ಕೆಳಗಿನ ಕೊರತೆಗಳನ್ನೂ ಸೇರಿಸ ಬಹುದು :—

(೧) ಶಾಸ್ತ್ರೀಯವಾದ ಕನ್ನಡ ಇತಿಹಾಸ ಗ್ರಂಥಗಳ ಅಭಾವ, ಈ ವಿಭಾಗದಲ್ಲಿ ಇದ್ದ ಬಹುಮಟ್ಟಿಗಿನ ಗ್ರಂಥಗಳು ಇಂಗ್ಲೀಷಿನಲ್ಲಿಯೇ ಇವೆ. ಇವಾದರೂ ನಿಧಾನ ಕನ್ನಡಕ್ಕೆ ಬರಬೇಕು.

(೨) ಕನ್ನಡ ಕಾವ್ಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕಠಿಣ ಶಬ್ದಗಳ—ಸರಿಯಾದ ಅರ್ಥ—ಉತ್ಪತ್ತಿ, ಪ್ರಯೋಗ—ಮತ್ತು ಸಂದರ್ಭ ಗಳನ್ನು ಹೇಳುವ ಒಳ್ಳೆಯ ಕನ್ನಡ ಕನ್ನಡ ಕೋಶ.

(೩) ಭಾಷಾಶಾಸ್ತ್ರದ ಬಗ್ಗೆ ಗ್ರಂಥಗಳು : "ಕೈಪಿಡಿ" "ವ್ಯಾಕರಣೋ ಪನ್ಯಾಸ ಮಂಜರಿ" ಮತ್ತು ಶಂ. ಬಾ. ಅವರ ಗ್ರಂಥಗಳನ್ನುಳಿದರೆ ಕನ್ನಡ ಭಾಷಾಶಾಸ್ತ್ರವೆಲ್ಲ ಇಂಗ್ಲಿಷ ಮೂಲಕವಾಗಿಯೇ ಅಭ್ಯಸಿಸಲ್ಪಡಬೇಕಾದುದ್ದು ವಿಷಾದದ ಸಂಗತಿ. ಈ ವಿಷಯದಲ್ಲಿ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳ ಗೋಳನ್ನಂತೂ ದೇವರೇ ಬಲ್ಲ ! ಕನ್ನಡ ಭಾಷಾಶಾಸ್ತ್ರವನ್ನು ಅಭ್ಯಾಸಮಾಡ ಬೇಕಾದ ಈ ವಿದ್ಯಾರ್ಥಿಗಳು ರಾಮಕೃಷ್ಣಯ್ಯ. ಕಾಲ್ಡ್ವೆಲ್, ನರಸಿಂಹಾ ಚಾರ್ಯರ ಗ್ರಂಥಗಳ ಇಂಗ್ಲೀಷನ್ನು ಓದಿ— ಆ agglutinative, inflexional ಅರ್ಥಮಾಡಿಕೊಂಡು — ಅನಂತರ ಕನ್ನಡದಲ್ಲಿ ಭಾಷಾಂತರಿಸಿ ಪರೀಕ್ಷೆಗೆ ಕೈಯೆತ್ತಬೇಕು. ಈ "ಲುಟ to Wallow" ಪರಂಪರೆಯು ನಿಲ್ಲಬೇಕು. ಇದೆಲ್ಲ ಶುದ್ಧ ದ್ರಾವಿಡ ಪ್ರಾಣಾಯಾಮ! ಕನ್ನಡ ವಿದ್ಯಾರ್ಥಿ ಗಳು ಇನ್ನಾದರೂ ತಮ್ಮ "ಸೊಂಡೆಯಿಂದಲೇ" ನೀರು ಕುಡಿಯುವಂತಾಗ ಬೇಕು....ಅದಕ್ಕಾಗಿ ಗ್ರಂಥಗಳೆಲ್ಲಿ? ಗ್ರಂಥಕರ್ತರೆಲ್ಲಿ?........

ಹಾಗಾದರೆ ಈ ಪ್ರಶ್ನಾರ್ಥಕಕ್ಕೆ ಪರಿಹಾರವಿದೆಯೆ ? ವಿಚಾರಿಸಬೇಕು. ಇಂಥ ಕೆಲಸಗಳನ್ನು ಕೈಕೊಳ್ಳಲು— ಏಕಾಂಗ ವೀರರಾಗಿ ದುಡಿಯಲು— ಡಾ. ಜಾನ್‌ಸನ್‌ರಂಥವರಿಗೆ ಮಾತ್ರ ಸಾಧ್ಯ! ಅಂಥ ಪ್ರತಿಭಾ ಸೌಲಭ್ಯವಿಲ್ಲ ದಿದ್ದಲ್ಲಿ ಕನ್ನಡದ ಸಂಘಸಂಸ್ಥೆಗಳು ಈ ಕೆಲಸವನ್ನು ಅಂಗೀಕರಿಸಬೇಕು.

ಮೈಸೂರ ವಿಶ್ವವಿದ್ಯಾನಿಲಯವು ಕನ್ನಡಕ್ಕೆ ಮಾಡಿದ ಸೇವೆಯ ೧/೧೦ ದಷ್ಟು ಸಹ ಮಾಡಿರದ ಮುಂಬೈ ವಿಶ್ವವಿದ್ಯಾಲಯದಂತಹ ಸಂಸ್ಥೆ ಗಳು ಮುಂದಾಗಿ ಪಾಠ ಹಾಕಿಕೊಡಬೇಕು. ಒಳ್ಳೆಯ ವಿದ್ವಾಂಸರ ಮಂಡಲಗಳನ್ನು ನಿಯಮಿಸಿ ನಿಧಾನ ತಮ್ಮ ಪಠ್ಯ ಪುಸ್ತಕಗಳಾದರೂ ಸಕಾ

ಲಕ್ಕೆ ದೊರಕುವಂತೆ ಮಾಡಿಕೊಳ್ಳಬೇಕು. ಪ್ರತಿ ವರ್ಷಾಂತ್ಯದಲ್ಲಿ ವಿದ್ಯಾಲಯದಿಂದ ಒಂದಾದರೂ ಪುಸ್ತಕ ಹೊರಬೀಳುವಂತೆ ಜಾಗ್ರತೆ ವಹಿಸಬೇಕು.

ಸಾಹಿತ್ಯ ಪರಿಷತ್ತು—ವಿದ್ಯಾವರ್ಧಕ ಸಂಘಗಳಾದರೂ ಕೂಡ ನಿಶ್ಚಿತ ಸಮಿತಿಗಳನ್ನಿಟ್ಟುಕೊಂಡು ಕೆಲಸ ಸಾಗಿಸಬಹುದು. ಈ ಸಂಸ್ಥೆಗಳು ಈಗಾಗಲೇ ಕೈಕೊಂಡ ಕನ್ನಡ ಕೋಶ, ಮತ್ತು ಇತಿಹಾಸ ಯೋಜನೆಗಳನ್ನು ಕನ್ನಡ ಜನತೆ ಆತುರವಾಗಿ ಎದುರುನೋಡುತ್ತಲಿದೆ.

ಕರ್ನಾಟಕದ ರಾಜವ ನೆತನಗಳು ಕೂಡ ಈ ಋಣದಿಂದ ನಿರ್ಲಿಪ್ತವಾಗುಳಿಯವು. ಮೈಸೂರು ಆಸ್ಥಾನವು ಹಾಕಿಕೊಟ್ಟ ಮಾದರಿಯು ಕರ್ನಾಟಕದ ಇತರ ಚಿಕ್ಕ ಪುಟ್ಟ ಸಂಸ್ಥಾನಗಳಿಗೂ ಮಾದರಿಯಾಗಬೇಕು. ಕನ್ನಡದ ನೆಲದ ಪುಣ್ಯವನ್ನು ಪಡೆದು, ಕನ್ನಡ ತಾಯಿ ಕೃಪೆಯಲ್ಲಿ ಪೋಷಿತರಾದ ಕನ್ನಡ ಸಂಸ್ಥಾನಿಕರು ಈ ಸಾಂಸ್ಕೃತಿಕ ದಿಶೆಯಲ್ಲಿ ತುಂಬಾ ಸೇವೆಯನ್ನು ಮಾಡುವಂತಿದೆ.

ಅಮೇರಿಕಾದಂತಹ ರಾಷ್ಟ್ರಗಳಲ್ಲಿ ನಗರಸಭೆಗಳು ಒಂದೊಂದು ಕಾಲೇಜನ್ನೇ ನಡೆಯಿಸಬಹುದಾದಲ್ಲಿ ನಮ್ಮ ನಗರಸಭೆಗಳು ಈ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಏಕೆ ಭಾಗವಹಿಸಬಾರದು? ಹಣವುಳ್ಳ ನಗರಸಭೆಗಳೆಲ್ಲವೂ ಪುರಜನರಹಿತಕ್ಕಾಗಿ ಇಂತಹ Extension ಭಾಷಣ ಮಾಲೆಯನ್ನು ಏರ್ಪಡಿಸುವುದು ಕ್ರಮ ಪ್ರಾಪ್ತವಾಗಿದೆ.

ಹಾಗೆಯೇ, ಕರ್ನಾಟಕದಲ್ಲಿಯ ಕಾಲೇಜುಗಳ ಕನ್ನಡ ಸಂಘಗಳೂ ಈ ಕಾರ್ಯದಲ್ಲಿ ಸಹಾಯ ಮಾಡಬಲ್ಲವು.

ಹೀಗೆ ಬಹು ವಿಧವಾಗಿ ಸಹಾಯ ದೊರೆತರೆ ಮಾತ್ರ ಕನ್ನಡ ವಿಚಾರ ಸಾಹಿತ್ಯ ಉಜ್ವಲವಾಗಿ—ವಿಪುಲವಾಗಿ—ಬೆಳೆಯಬಹುದಾಗಿದೆ. ಅಂದರೇನೇ ಬುದ್ಧಿ-ಭಾವನೆಗಳ ಹವಣು ಸರಿಯಾಗಬಹುದು.

ಕನ್ನಡ ಜನ ಮನಸ್ಸುಮಾಡಿದರೆ ಯಾವುದು ತಾನೆ ದುಸ್ಸಾಧ್ಯ?

"ಶ್ರೀಯುತನೊಳ್ ಉದಾರತೆ ವಾಕ್-
ಶ್ರೀಯುತನೊಳ್ ಅಮತ್ಸರತ್ವಂ"

ನೆಲೆಗೊಂಡರೆ, ಆ ಕಾಲವೂ ತೀವ್ರ ಬಂದೀತು; ಬರಲಿ.

# ಏಕೀಕರಣ ಮತ್ತು ಕನ್ನಡ ಸಾಹಿತ್ಯ

ಕರ್ನಾಟಕ ಏಕೀಕರಣವು ಇಂದು ಮನೆಯ ಮಾತಾಗಿದೆ. ಜೀವನದ ಪ್ರತಿಯೊಂದು ವಿಭಾಗದಲ್ಲಿಯೂ ವಿಚ್ಛಿನ್ನ ಕರ್ನಾಟಕದ ಕಹಿಯನ್ನುಂಡ ಜನತೆ ತನ್ನತನಕ್ಕಾಗಿ ಇಂದು ಹೋರಾಡುತ್ತಿದೆ. ರಾಜ್ಯಕ್ಷೇತ್ರದಿಂದ ನೂರಾರು ಮೈಲು ದೂರ ಸಿಡಿದುನಿಂತ ಜನರ ಸಾವು ನೋವುಗಳನ್ನೂ ಆಶೆ ಆಕಾಂಕ್ಷೆಗಳನ್ನೂ ಅರಿಯದ ರಾಜ್ಯಸಿಂಹಾಸನವು ಇಂದು ಬೇಕಿಲ್ಲ. ಜನತೆಯನ್ನು ಬಿಟ್ಟು ದೂರವಿರುವ ಆಡಳಿತೆಯು ಎಂದಿಗೂ ಸುಗಮವಾಗದು. ಈ ವಿಚಾರವನ್ನು ಬರ್ಕ ಎಂಬ ಆಂಗ್ಲ ತತ್ವವೇತ್ತನು ಈ ಮೊದಲೇ ಉಸುರಿದ್ದಾನೆ:–"No contrivance can prevent the effect of distance in weakening Government. Seasr oll and months pass between the order and the execution. In large bodies the circulation of power must be less vigorous at the extremities" ಹೀಗಾಗಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಆತಂಕಗಳಿಗೆ ಒಳಪಟ್ಟ ಕನ್ನಡ ನಾಡು ಪುನಃ ಚೇತರಿಸಲು ಯತ್ನಿಸಿದೆ.

ಆದರೆ ಈ ವಿಭಕ್ತತೆ ಜೀವನದ ಇತರ ಭಾಗಗಳ ಮೇಲಿನಂತೆಯೇ ನಮ್ಮ ಜನದ ನುಡಿ ಮತ್ತು ಸಾಹಿತ್ಯದ ಮೇಲೂ ಪರಿಣಾಮವನ್ನು ಮಾಡದೆ ಹೋಗಿಲ್ಲ. ಕರ್ನಾಟಕ ಏಕೀಕರಣದ ಜೊತೆಗೆ ಎಷ್ಟೋ ಮಟ್ಟಿಗೆ ಕನ್ನಡದ ಏಕೀಕರಣವೂ ಪರಸ್ಪರ ತಿಳಿವಳಿಕೆಯೂ ಇನ್ನೂ ಹೆಚ್ಚಾಗಬೇಕಾಗಿದೆ. ಒಂದೇ ನುಡಿ ಒಂದೇ ಜನಾಂಗಕ್ಕೆ ಸೇರಿದ್ದರೂ ಕೂಡ ಕನ್ನಡರು ಈ ವಿಭಕ್ತತೆಯ ಮೂಲಕ ತಮ್ಮ ತಮ್ಮ ಭಾಗದಲ್ಲಿ ಪ್ರಬಲರಿದ್ದ ಜನರ ಜೀವನ ಮಾರ್ಗದ ಪ್ರಭಾವಕ್ಕೆ ಒಳಗಾಗಿದ್ದಾರೆ. ತಿಂಡಿತಿನಸುಗಳ ರುಚಿಯು ಕೂಡ ಈ ವಿಭಕ್ತತೆಯನ್ನು ಸೂಚಿಸುತ್ತದೆ. ಮೈಸೂರಿನ ಮೆಣಸು, ಹುಳಿ ಮಜ್ಜಿಗೆ ಧಾರವಾಡದವರ ತಲೆ ತಿರುಗಿಸಿದರೆ, ಧಾರವಾಡದ ಸಿಹಿ ಮೈಸೂರವರ ಮೈಗೆ ಇರುಬು ಅಂಟಿಸುತ್ತದೆ. ಅದರಿಂದ ಅವರಿಗೆ "ಡಾಯ್ಬೆಟಿಸ್ಸು."

ಹೀಗೆ ಭಿನ್ನ ಭಿನ್ನವಾದ ಜೀವನದ ಮೂಲಕ ಜೀವನದ ನಿಕಟ ಸಂಬಂಧಿಯಾದ ಸಾಹಿತ್ಯವು ಕೂಡ ಕೆಲಮಟ್ಟಿಗೆ ಮಾರ್ಪಡುವುದೂ ಕ್ರಮ ಪ್ರಾಪ್ತವೇ ಆಗಿದೆ. ಇದರ ಪರಿಣಾಮವು ಸಾಹಿತ್ಯದ ಮಾತಿನ ರೀತಿ, ಶಬ್ದ ಕೋಶ, ಪಡೆನುಡಿ, ಪ್ರಯೋಗ, ವ್ಯಾಕರಣ, ವಿಚಾರಸರಣಿ, ವಸ್ತು—ಇವೆಲ್ಲ ದರ ಮೇಲೂ ಆಗಿದೆ. ಈ ರೀತಿಯ ವಿಭಿನ್ನತೆ ನೈಸರ್ಗಿಕ ಕಾರಣಗಳ ಮೂಲಕ ಕೆಲಮಟ್ಟಿಗೆ ಅನಿವಾರ್ಯವಾದರೂ ಪರಸ್ಪರ ಬಳಕೆ ಕಡಮೆ ಇದ್ದ ಇಂದಿನ ಸಾಮಾನ್ಯ ಕನ್ನಡ ವಾಚಕನಿಗೆ ಸಮಸ್ಯೆಯೇ ಆಗಿದೆ

ಇಂತಹ ವಿಭಿನ್ನತೆ ಕನ್ನಡಕ್ಕೆ ಹೊಸದೆಂದೇನೂ ಕಾಣುವದಿಲ್ಲ. ಈ ರೀತಿ ಸಾಹಿತ್ಯದಲ್ಲಿ ಅನೇಕ "ಮಾರ್ಗ"ಗಳಿದ್ದುದು ಬಹು ಪ್ರಾಚೀನವೆಂದು ಕಾಣುತ್ತದೆ. ಮಹಾಭಾರತ ಮೃಚ್ಛಕಟಿಕಗಳನ್ನುಳಿದರೆ ಸಮಸ್ತ ಜನಾಂಗ ಸೂಚಕವಾದ ಕರ್ನಾಟಕ ಪದಪ್ರಯೋಗವು ಕೂಡ ಕ್ವಚಿತ್ತಾಗಿ ದೊರೆಯು ತ್ತದೆ. ರಾಮಾಯಣದಲ್ಲಿ ಕೂಡ ದೇಶಗಳ ಹೆಸರನ್ನು ಹೇಳುವಾಗ ಆಂಧ್ರ ಕೇರಳಾದಿಗಳ ಜೊತೆಗೆ "ಕರ್ನಾಟಕ"ವೆಂದು ಉಲ್ಲೇಖ ಬಂದಿಲ್ಲ. ಇಲ್ಲಿ ದಕ್ಷಿಣದ ಎಲ್ಲ ಪ್ರಮುಖ ನದಿ ಗಿರಿಗಳನ್ನು ಹೇಳಿ "ಮಹಿಷಕ" ಎಂದು ಮಾತ್ರ ಇದೆ. (ಕಿಷ್ಕಿಂಧಾ ಕಾಂಡ:—ಪು. ೫೪೨ ನಿರ್ಣಯಸಾಗರ)

ಅಬ್ರವಂತೀಮ್ ಅವಂತೀಮ್ ಚ ಸರ್ವಮೇವಾನುಪಶ್ಯತ|
ವಿದರ್ಭಾನೃಷ್ಟಿಕಾಂಶ್ಚೈವ ರಮ್ಯಾನ್ಮಹಿಷಕಾನಪಿ
........ನದೀಂ ಗೋದಾವರೀಂಚ ಸರ್ವಮೇವಾನುಪಶ್ಯತ||
ತಥೈವಾಂಧ್ರಾಂಶ್ಚ ಪುಂಡ್ರಾಂಶ್ಚ
ಚೋಲಾನ್ ಪಾಂಡ್ಯಾಂಶ್ಚ ಕೇರಲಾನ್||

ಆ ಮೇಲೆ ಕನ್ನಡ ಅರಸರ ಕಾಲಕ್ಕೂ ಕೂಡ ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟ ಕನ್ನಡ ಜನತೆಗೆ ರಾಷ್ಟ್ರಕೂಟ ಚಾಲುಕ್ಯ ಹೆಚ್ಚಾಗಿ ಗೊತ್ತಿತ್ತೇ ವಿನಾ ಅಖಂಡ ಕರ್ನಾಟಕದ ಕಲ್ಪನೆ ಅಷ್ಟಾಗಿ ಇರಲಿಲ್ಲವೆಂದು ಕಾಣುತ್ತದೆ. ಕ್ರಿ. ಶ. ೪–೫ ರಲ್ಲಿ ಕದಂಬರಾಜ ಶಾಂತಿವರ್ಮನನ್ನು ಸಮಗ್ರ ಕರ್ನಾಟಕ ಭೂವರ್ಗ ಭರ್ತಾರನೆಂದು ಕರೆದಿದ್ದರೂ ೧೩ನೇ ಶ. ದಲ್ಲಿ ಆಂಡಯ್ಯನು "ಕನ್ನಡ ಮೆನಿಪ್ಪಾ ನಾಡನ್ನು" ಹೊಗಳಿದ್ದರೂ ರಾಷ್ಟ್ರದಕಿಂತ ಅಂದು ರಾಜನ ಬೆಲೆ ಹೆಚ್ಚು.

ಹೀಗಾಗಿ ಕನ್ನಡವೇ ಆದರೂ ಬೇರೆ ಬೇರೆ ಆಧಿಪತ್ಯಗಳಿಗೆ ಒಳಪಟ್ಟ ನಾಡಿನ ದೇಸಿ ಬೇರೆಯಾಯಿತು. ಬರಿಯ ದೇಸಿಯಿಂದ ಕೂಡಿದ ಸಾಹಿತ್ಯವು ಪ್ರಾದೇಶಿಕವಾಗಿ ಸಾಮಾನ್ಯರಿಗೆ ತಿಳಿಯಲು ಕಠಿಣವಾಯಿತು. "ದೇಶಿ ಮಾರ್ಗದೊಳ್ ಒಡಂಬ"ಡಲು ಹವಣಿಸಿತು. ಅಲ್ಲದೆ ಭಾಷಾಪ್ರಯೋಗವೂ ಕೂಡ ಬಹುಮಟ್ಟಿಗೆ ಭಿನ್ನವಾಯಿತು. ಅಂತಲೇ ೯ನೇ ಶತಮಾನದ ನೃಪತುಂಗನು ಕನ್ನಡ ಭಾಷೆಯು ದೇಸಿಯ ಅನಂತವಿಧತೆಯ ಮೂಲಕ ದುರವಗಾಹವಾಗಿರುವದೆಂದು ಹೇಳಿ ಕನ್ನಡದಲ್ಲಿ ಪ್ರಮುಖವಾಗಿ ಇದ್ದ ಉತ್ತರ ಮತ್ತು ದಕ್ಷಿಣ ಮಾರ್ಗಗಳನ್ನು ಹೇಳಿದ್ದಾನೆ.

ದೋಷಮಿನಿತೆಂದು ಬಗೆದು
ದ್ಭಾಷಿಸಿ ತಱಿಸಂದು ಕನ್ನಡಂಗಳೊಳೆಂದಂ|
ವಾಸುಗಿಯುಮಱಿಯಲಾಱದೆ
ಬೇಸರುಗುಂ ದೇಶಿ ಬೇಱಿವೇಱಪ್ಪುದಱಿಂ||

ಕವಿಗಳು ಅನಾದಿ ಲೋಕೋದ್ಭವಮಪ್ಪುದರಿಂದ ಸವಿಶೇಷೋಕ್ತಿಗಳು ಅನಂತವಿಧಗಳೆಂದೂ ಮಾತೂ ಅದರಿಂದ ಅನಂತಭೇದವೆಂದೂ ಹೇಳಿ ಸಮ ಮಧುರಾದಿಗಳನ್ನು ಹೇಳಿದ ತರುವಾಯ ಕನ್ನಡಕ್ಕೆ ವಿಶಿಷ್ಟವಾದ ದಕ್ಷಿಣೋತ್ತರ ಮಾರ್ಗಗಳನ್ನು ನೃಪತುಂಗನು ಹೇಳುತ್ತಾನೆ. ನಾಗವರ್ಮ ಭಟ್ಟಾಕಲಂಕರೂ ಕೂಡ ಈ ಮತವನ್ನು ಸಮರ್ಥಿಸುತ್ತಾರೆ. ಇವರ ಪ್ರಕಾರ ಆನ್ ಆಮ್ ಎಂಬುವು ದಕ್ಷಿಣ ಮಾರ್ಗವಾಚಕ; ನಾನ್ ನಾಮ್ ಎಂಬುವು ಉತ್ತರ ಮಾರ್ಗದವು.

ಅಲ್ಲದೆ ದಕ್ಷಿಣದಲ್ಲಿ "ನೋಡುವೆಂ'' ಎಂಬುದು "ನೋೞ್ಪೆಂ" ಎಂದೂ, 'ಬೇಡುವೆಂ' ಎಂಬುದು "ಬೇೞ್ಪೆಂ" ಎಂದೂ, 'ಬರಿಪೆ' 'ಇರಿಪೆ' 'ತರಿಪೆ' ಇವು ಅನುಕ್ರಮವಾಗಿ 'ಬರಿಸುವೆ' 'ಇರಿಸುವೆ' 'ತರಿಸುವೆ'ನೆಂದೂ ಆಗುತ್ತಿವೆಯಾಗಿ ನೃಪತುಂಗನು ಹೇಳುತ್ತಾನೆ. ಆದರೆ 'ಸೂಡು'ವೆ ಎಂಬುದು 'ಸೂೞ್ಪೆ' ಎಂದಾಗಲೀ, ಕೂಡುವೆ ಎಂಬುದು 'ಕೂೞ್ಪೆ' ಎಂದಾಗಲೀ 'ಕಾಡುವೆ' ಎಂಬದು 'ಕಾೞ್ಪೆ' ಎಂದಾಗಲೀ ಆಗದು. ಇವೂ ಅಲ್ಲದೆ 'ಬರಿಪ್ಪೆ' 'ತರಿಪ್ಪೆ' 'ಇರಿಪ್ಪೆ'—ಇವು ಉತ್ತರೋತ್ತರ ಪ್ರಯೋಗಗಳೆಂದು ಹೇಳುತ್ತಾನೆ. ಅವನ ರಾಜ್ಯದಲ್ಲಿಯೇ ಕೆಲವು ಭಾಗವು ತಿರುಳ್ಗನ್ನಡದ ನಾಡಾಯಿತು.

"ಅದರೊಳಗಂ ಕಿಸುವೊಳಲ್ ಆವಿದಿತ ಕೊಪಣ ನಗರದ ಆ ಪುಲಿಗೆರೆಯು ಆಸದಭಿಸ್ತುತಮಪ್ಪ ಒಕ್ಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್"

ಪಂಪ ರನ್ನರು ಕೂಡ ತಮ್ಮ ಗ್ರಂಥಗಳ ತಿರುಳ್ಗನ್ನಡವನ್ನು ನಿರ್ದೇಶಿಸಿಯೇ ಗ್ರಂಥ ಪ್ರಾರಂಭವನ್ನು ಮಾಡಿದರು.

ಆಮೇಲೂ ಕೂಡ ಭಿನ್ನ ಭಿನ್ನ ಆಳ್ವಿಕೆಯ ಮೂಲಕ ಕನ್ನಡವು ತನ್ನ ಕೋಶ ಪ್ರಯೋಗ ಮತ್ತು ವಾಕ್ಯರಚನೆಗಳನ್ನು ಎಷ್ಟೋ ಬದಲಿಸಿಕೊಂಡಿತು. ಸಾಹಿತ್ಯವು ತೀರ ವಸ್ತುನಿಷ್ಠವಾಗಿ ಸ್ಥೂಲವಾಗಿ ತಿಳಿಯಲು ಸಾಧ್ಯವಿದ್ದರೂ ಅಲ್ಲಲ್ಲಿ ಹಲಕೆಲವು ಕರ್ನಾಟಕ ಕವಿಚೂತ ವನಚೈತ್ರರು ಉದ್ಭವಿಸಿದ್ದರೂ ಪೇಷ್ವಾ, ಹೈದರ ಮತ್ತು ಟಿಪ್ಪುಗಳ ಆಳಿಕೆಯ ಪರಿಣಾಮವು ಸಾಹಿತ್ಯದ ಮೇಲೆ ಆಗದೆ ಹೋಗಲಿಲ್ಲ.

ಬ್ರಿಟಿಶ್‌ರ ಆಗಮನದಿಂದಲಂತೂ ಈ ಸಮಸ್ಯೆ ಇನ್ನೂ ಜಟಿಲವಾಯಿತು. ಪ್ರಾಮುಖ್ಯವ್ವಾಗಿ ೫-೬ ಆಧಿಪತ್ಯಗಳಿಗೆ ಒಳಪಟ್ಟು ಎಲ್ಲಕಡೆಗೂ ಅಲ್ಪಮತದಲ್ಲಿದ್ದ ಮೂಲಕ ಪ್ರಬಲರಾದ ಇತರ ಜನರ ಭಾಷೆ ಮತ್ತು ಸಾಹಿತ್ಯವು ಇದ್ದು ಬಿದ್ದು ಉಳಿದ ಕನ್ನಡದ ಮೇಲೆ ತನ್ನ ಪ್ರಭಾವವನ್ನು ಮಾಡಿದೆ. ಇಂದಿಗೂ ಕೂಡ ಉತ್ತರದಲ್ಲಿ ಕೇಸರಿ ಅಭಿಮಾನಿಗಳೂ, ದಕ್ಷಿಣದಲ್ಲಿ ಒರಿಯ ತ್ಯಾಗರಾಜ ಪಂಥಿಗಳೂ ಆದ ಕನ್ನಡಿಗರು ಇಲ್ಲದೆ ಇಲ್ಲ. ಪ್ರಸ್ತುತ, ನಾವು ಪರಸ್ಪರ ಬಳಿಕೆ ಕಡಿಮೆ ಇದ್ದ ಮೂಲಕ ಭಾಷೆ ಮತ್ತು ಸಾಹಿತ್ಯ ಮಾರ್ಪಟ್ಟಿದ್ದನ್ನು ಮಾತ್ರ ಗಮನಿಸಬೇಕು ಹೈದರಾಬಾದವು ಉರ್ದುವಿನಿಂದ ಹೆಚ್ಚಾಗಿ ತನ್ನ ಕೋಶವನ್ನು ಬೆಳೆಸಿದರೆ, ಉತ್ತರ ಕರ್ನಾಟಕವು ಮಹಾರಾಷ್ಟ್ರ ಪ್ರಭಾವಕ್ಕೆ ಒಳಗಾಗಿದೆ. ಹಿಂದಿನ ತಲೆಮಾರಿನವರೆಲ್ಲರೂ ಅಂಕಿಗಳನ್ನು ಹೇಳುತ್ತಿದ್ದುದು ಮರಾಠಿಯಲ್ಲಿಯೇ. ಇಂದಿಗೂ ವೇಳೆ ಮತ್ತು ಹಣದ ಭಾಷೆ ಬಹುಮಟ್ಟಿಗೆ ಮರಾಠಿಯೇ ಆಗಿದೆ. ಮೈಸೂರಲ್ಲಿ ಕೂಡ ಟಿಪ್ಪುವಿನ ಉರ್ದುವಿನ ಜೊತೆಗೆ ಇಂಗ್ಲಿಷ ಪ್ರಭಾವವೂ ಅತಿಯಾಗಿ ಸಾಗಿದೆ. ಸಾಲೆಗಳೆಲ್ಲ ಸ್ಕೂಲು; ಶಿಕ್ಷಕರೆಲ್ಲ ಮೇಷ್ಟ್ರು; ಫಲಾಹಾರದ ಅಂಗಡಿಗಳೆಲ್ಲ ಹೋಟ್ಲು; ತಿರುಗಾಟ. ವಾಕ್ಕು, ಬಡಿಗೆ, ಸ್ಟಿಕ್ಕು; ಟಾಕು, ಸ್ಟೀಲು; ಗಾಡಿ ರೈಲು ಇತ್ಯಾದಿ. ಹಾಗೆಯೇ ಉರ್ದುವಿನ ಗಂಗಾ ಯಮುನೆ ಕೂಡ ಇದೆ. ಪಲ್ಯೆಯೆಲ್ಲಾ ತರಕಾರಿ; ಇಲ್ಲಿಯ ಲಿಲಾವು ಅಲ್ಲಿ ಹರಾಜು ಇಲ್ಲಿ ಶಿಸ್ತಾಗಿರುವ

ಜನ ಅಲ್ಲಿ ರುಸ್ತುಂ; ಇಲ್ಲಿಯ ಬಲವಂತರು ಅಲ್ಲಿ ಪಾಟ; ಮೇಲಾಟ, ಪೈಪೋಟ; ಇಲ್ಲಿ ಸುಖವಾಗಿದ್ದವರು ಅಲ್ಲಿ ಷೋಕಾಗಿರುತ್ತಾರೆ. ಅಲ್ಲದೆ ನೃಪತುಂಗನು ಹೇಳಿದ ರೀತಿಯಲ್ಲಿ ಎಷ್ಟೋ ಶಬ್ದಗಳು ಭಿನ್ನಾರ್ಥವನ್ನು ಕೂಡ ಕೊಡುತ್ತವೆ. ಬಚ್ಚಲ; ಆಗ್ರಹ; ಕಿರುಕಳ; ಜಗುಲಿ ಇತ್ಯಾದಿ.

ಇಂಗ್ಲಿಷ್ ಶಬ್ದಗಳನ್ನು ತೆಗೆದುಕೊಳ್ಳುವಲ್ಲಿಯೂ ಕೂಡ ಉತ್ತರ ಮತು ದಕ್ಷಿಣ ಕನ್ನಡಿಗರು ಬೇರೆ ಬೇರೆ ಮಾರ್ಗವನ್ನು ಅನುಸರಿಸಿದ್ದಾರೆ. ಮುನ್ಸಿ: ಲಾಯರು; ಲಾಂದರು ಇ. (ಪ್ಲೀಡರ, ಕಂದೀಲು)

ಅಷ್ಟೇ ಅಲ್ಲ, ಪರಸ್ಪರ ಬಳಿಕೆಯಿಲ್ಲದ ಈ ವಿಭಿನ್ನತೆಯು ಇನ್ನೂ ಮುಂದು ಹೋಗಿದೆ. ತೆಗೆದುಕೊಂಡ ಇಂಗ್ಲಿಷ ಶಬ್ದಗಳ ಉಚ್ಚಾರವು ಕೂಡ ಉತ್ತರ ಕರ್ನಾಟಕ ಮತ್ತು ಮೈಸೂರಲ್ಲಿ ಭಿನ್ನವಾಗಿದೆ. ಬ್ರಿಡ್ಜ; ಜಡ್ಜ; ಷೋ; ಬಡ್ಜೆಟ್, ಲಾಡ್ಜ ಅಲ್ಲದೆ ಕಾಲೆಡ್ಜ ಇ.

ಕೆಲವು ವಸ್ತುಗಳ ಹೆಸರಿನ ಅವಶ್ಯಕತೆಯಲ್ಲೂ ಸಾಮಾನ್ಯತೆ ಕಂಡು ಬರುವದಿಲ್ಲ. ಪಿನ್ ಟಾಚಣಿ; ಗುಂಡುಸೂಜಿ; ಚಾಕ್ ಖಡು, ಸೀಮೆಸುಣ್ಣ; ರಾಕ್‌ಆಯಿಲ್ ಕಲ್ಲೆಣ್ಣೆ, ಸೀಮೆಎಣ್ಣೆ ಇತ್ಯಾದಿ.

ಅಷ್ಟೇ ಅಲ್ಲದೆ ವಾಕ್ಯರಚನೆಯ ಪ್ರಯೋಗವೂ ಕೂಡ ಎಷ್ಟೋ ಭಿನ್ನವಾಗಿದೆ

"ಇದಕ್ಕೆ ಒಂಟಿಯೆನ್ನುತ್ತಾರೆ ?"
"ಇದನ್ನು ಒಂಟಿಯೆನ್ನುತ್ತಾರೆ";
"ಅವನು ಬರುವುದಿಲ್ಲ ತಾನೆ?"
"ಅವನು ಬರುವದಿಲ್ಲವಷ್ಟೆ?"

ಕೆಲಕೆಲವು ಕಡೆಗೆ ಉತ್ತರ ಕರ್ನಾಟಕದಲ್ಲಿ ಅವಧಾರಣಾರ್ಥದಲ್ಲಿ ಎರಡು ನಿಷೇಧವನ್ನು ಪಯೋಗಿಸುವುದೂ ಉಂಟು. "ನೀನು ಹೀಗೆ ಮಾಡದ ಹೊರತು" ಇತ್ಯಾದಿ.

ಇದರಂತೆಯೇ ಮಂಗಳೂರ ಕನ್ನಡವು ಪೂರ್ವದ್ರಾವಿಡ ಮತ್ತು ತುಳುವಿಗೆ ಸಮೀಪವುಳ್ಳ ಅನೇಕ ಶಬ್ದಗಳನ್ನೂ ಕೆಲವು ವಿಶಿಷ್ಟ ಪ್ರಯೋಗ ಗಳನ್ನೂ ತನ್ನ ಸಾಹಿತ್ಯದಲ್ಲಿಟ್ಟುಕೊಂಡಿದೆ. ಸಂಭವಾರ್ಥದ "ರೆ" (ಹೀಗೆ ಮಾಡುವರೆ) "ಮತ್ತು" ಅರ್ಥದಲ್ಲಿಯ "ಯೂ" ಇತ್ಯಾದಿ ವಿಶಿಷ್ಟ ಪ್ರಯೋಗ ಗಳನ್ನು ಗಮನಿಸಬಹುದು.

ಇದರ ಜೊತೆಗೆ ಗಡಿನಾಡಿನ "ಒಳಖಾಸು" "ಪಿಂಗ್ಯಾಸು" "ಸಮ ಜಾಯ್ಸು" "ಕಾವಳ್ಯಾ" ಇತ್ಯಾದಿಗಳನ್ನು ಸೇರಿಸಿದರೆ ಇಂದಿನ ಕನ್ನಡದ ವೇಷಿಯ ಕಲ್ಪನೆ ಬರುತ್ತದೆ.

ಇದರಿಂದ ಸಾಹಿತ್ಯದಲ್ಲಿ ಕೋಶದ, ವಾಕ್ಯರಚನೆಯ, ಮತ್ತು ವಿಚಾರ ಗಳ ವೈವಿಧ್ಯವಿರಬಾರದೆಂದಲ್ಲ. ಅನೇಕ ಬಣ್ಣಗಳ ಸಮ್ಮಿಲನದಿಂದಲೇ ಮಳೆಬಿಲ್ಲು ಕಾಂತಿಯನ್ನು ಪಡೆವುದು. ಆದರೆ ಆ ಸಮ್ಮಿಲನದಲ್ಲಿ ಒಂದು ಕ್ರಮವಿರಬೇಕು. ಪರಸ್ಪರ ಸೌಹಾರ್ದವಿರಬೇಕು. ವೈವಿಧ್ಯ ಭಿನ್ನತೆ ಯಾಗಬಾರದು. ವೈಯಕ್ತಿಕತೆ ಶಿಷ್ಟತೆ (Separation) ಯಾಗಬಾರದು. ಪರಸ್ಪರ ಕಡಿಮೆ ಬಳಿಕೆ ಇದ್ದ ಮೂಲಕ ಈಗಾಗಲೇ ದುರವಗಾಹವಾಗಿದ್ದ ದೇಸಿ ಇನ್ನೂ ಜಟಿಲವಾಗಬಾರದು. ಮೈಸೂರಿನವರದು "ತಂಜಾವರಿ ಛಾಪಿ''ಯೆಂದೂ, ಧಾರವಾಡದವರದು ಗಡುಸೆಂದೂ ಪರಸ್ಪರರು ಪ್ರಾದೇಶಿಕ ಡಿಕ್ಸನರಿಯನ್ನೂ ಕೇಳುವುದು ನಿಲ್ಲಬೇಕು. ಪರಸ್ಪರ ಬಳಿಕೆ ಬೆಳೆದು ಪರ ಸ್ಪರರ ಅರ್ಥವಾಗಿ ಕನ್ನಡದ ಪ್ರಾತಿನಿಧಿಕವಾದ ಕವಿಗಳು ಇಂದು ಒಪ್ಪಿತ ರಾಗಬೇಕು. ಎಲ್ಲ ಪ್ರವಾಹಗಳೂ ಕೂಡಿ ಕನ್ನಡ ಸಂಗಮದ ನೀರು ಹೆಚ್ಚಾಗಬೇಕು. ಆಳವಾಗಬೇಕು. ಸಮಗ್ರ ಜೀವನವನ್ನು ತೋರಿಸಿ ಜೀವನದ ಆಳವನ್ನು ತೋರಿಸುವ ಸಾಹಿತ್ಯದಿಂದ ಎಲ್ಲರೂ ಬೇರೆ ಬೇರೆ ಜೀವನವನ್ನು ಕಂಡು ಹರ್ಷಪುಲಕಿತರಾಗಬೇಕು ಪುಟ್ಟಪ್ಪನವರ ಮಲೆ ನಾಡಿನ ಚಿತ್ರಗಳೂ ಕಾರಂತರ ಬೆಟ್ಟದ ಜೀವವೂ ಎಲ್ಲ ಕನ್ನಡಿಗರ ಅನು ಭವ ಸಾಧ್ಯವಾಗಿ ಪೂರ್ಣ ಅರ್ಥವಾಗಬೇಕು. ಅಂದರೆ ಎಲ್ಲ ಕನ್ನಡಿಗರೂ ಒಂದೇ ಆಧಿಪತ್ಯಕ್ಕೆ ಸೇರಬೇಕು.

ಸಾಹಿತ್ಯದ ಶಬ್ದಕೋಶ, ಪ್ರಯೋಗ, ವಾಕ್ಯರಚನೆಗಳ ಮೇಲೆ ವಿಭಕ್ತ ಕರ್ನಾಟಕವು ಮಾಡಿದ ಪರಿಣಾಮವನ್ನು ನೋಡಿಯಾದಮೇಲೆ ವಿಚಾರ ಸರಣಿ ಸಾಹಿತ್ಯವಸ್ತುವಿನ ಮೇಲಾದ ಪರಿಣಾಮವನ್ನೂ ನಾವು ನೋಡ ಬಹುದು.

ರಾಜಕೀಯ ಆಧಿಪತ್ಯಗಳೇ ಬೇರೆಬೇರೆಯಾದ ಮೂಲಕ ಆ ಆ ಜನರ ಜೀವನ ಸಮಸ್ಯೆಗಳೂ ವಿಚಾರಸರಣಿಯೂ ಭಿನ್ನವಾಗಿರುವುದು ಸ್ವಾಭಾ ವಿಕವೇ.

ಶುದ್ಧ ಸಾಹಿತ್ಯವು ಕ್ಲಿಯೋಪಾತ್ರಳ ಸೌಂದರ್ಯದ ಹಾಗೆ ನಿತ್ಯ ನವ್ಯವೂ ತ್ರಿಕಾಲಾಬಾಧಿತವೂ ಆಗಿದ್ದರೂ,

—"Age can not wither her nor custom stale her infimite variety"—

ಜೀವನದ ಮಾರ್ಗದರ್ಶಿಯಾದ ಸಾಹಿತ್ಯವು. ತತ್ಕಾಲೀನ ಜೀವನ ವನ್ನು ಬಿಟ್ಟು ಬಿಟ್ಟು ಒಂಟಿಯಾದ ಪರ್ವತದ ಶಿಖರದ ಹಾಗೆ ಸ್ವಯಂಭು ವಾಗಿ ನಿಲ್ಲದು. ದಕ್ಷಿಣ ಮಹಾರಾಷ್ಟ್ರ ಪ್ರದೇಶವೆನಿಸಿಕೊಂಡು, ಅಚ್ಚ ಗನ್ನಡವಾದರೂ ೨೦ನೇ ಶತಮಾನದ ಪ್ರಾರಂಭದ ವರೆಗೆ ಕನ್ನಡ ಶಾಲೆ ಗಳನ್ನು ಕೂಡ ಕಾಣದ ಉತ್ತರ ಕರ್ನಾಟಕದ ಸಮಸ್ಯೆಗಳೂ ಮತ್ತು ಉದಾ ರಾಂತಃಕರಣಿಗಳೂ ಕನ್ನಡಿಗರೂ ಆದ ಶ್ರೀಮನ್ಮಹಾರಾಜರವರ ಕೃಪಾ ಛತ್ರದಲ್ಲಿ ಲಾಲಿತವಾದ ಮೈಸೂರು ಕನ್ನಡದ ಸಮಸ್ಯೆಗಳೂ ಭಿನ್ನವಾಗಿರು ವದು ಸ್ವಾಭಾವಿಕವೇ. ಉತ್ತರ ಕರ್ನಾಟಕದ ಕಳೆದ ಅರ್ಧಶತಮಾನದ ಜೀವನವು ಒಂದು ಅವಿರತವಾದ ಹೋರಾಟವಾಗಿದೆ. ಅಂತಲೇ ಒಂದು ವಿಶಿಷ್ಟವಾದ ತರ್ಕಸರಣಿಯೂ ಕಂಡುಬರುತ್ತದೆ.

ಸಾಮಾನ್ಯವಾಗಿ "ಪ್ರೀತಿ" ಮತ್ತು ಕ್ರಾಂತಿಕಾರಕ ವಿಷಯಗಳೆಂದರೆ ಮೈಸೂರವರಿಗೆ ಅಷ್ಟು ಸದಭಿಪ್ರಾಯವಿಲ್ಲವೆಂದು ಉತ್ತರದವರ ಕಲ್ಪನೆ. ಈ ಮಾತನ್ನು ವಿನೋದದ ರೀತಿಯಲ್ಲಿ ಅನೇಕ ಲೇಖಕರು ಸಾಹಿತ್ಯದಲ್ಲಿ ಹೇಳಿ ದ್ದಾರೆ.

ಗೋಲ್ಡ್ ಸ್ಮಿತ್ ಕವಿಯ "She stoops to conqure" ಎಂಬ ನಾಟಕದ ಅನುವಾದವಾದ "ಪತಿವಶೀಕರಣ"ವೆಂಬ ನಾಟಕದಲ್ಲಿ ಪ್ರಗತಿ-ಪರರಾದ ದಿವಂಗತ ಕೆರೂರ ವಾಸುದೇವಾಚಾರ್ಯರು ೧೯೨೦ರ ಮೊದಲೇ ಮೈಸೂರಲ್ಲಿ ಇದ್ದು ಕಂಡ ತಮ್ಮ ಎನಿಸಿಕೆಯನ್ನು ಹೇಳಿದ್ದಾರೆ. ಅವರ ಪ್ರಕಾರ ಮೈಸೂರವರಿಗೆ ಪ್ರೀತಿ ಎಂದರೆ ಬೆಂಕಿ; ಅವರ ನಾಟಕಗಳೆಂದರೆ ಯಾವಾಗಲೂ ಗಾದೆ ಮಾತುಗಳಿಂದ ತುಂಬಿರಬೇಕು

ಕುಚೋದ್ಯ ಮೂರ್ತಿಯಾದ ತಮ್ಮಣಗೌಡನು "ವೆ ರೆವ ಕೇವೆಯ ನುಟ್ಟು ತಿರುಗುವ ಸನ್ಯಾಸಿ ಇರುಳು ಕಾಮಿನಿಯರನರಸುವನು" ಎನ್ನುವ ಪದ್ಯವನ್ನು ಹೇಳಿದ ಮೇಲೆ ಮಿತ್ರವರ್ಗದಲ್ಲಿ ಭಾಷ್ಯಕ್ಕೆ ಪ್ರಾರಂಭವಾಗುತ್ತದೆ.

"ಹೌದಪಾ ಹೌದೋ! ಪದಾ ಏನ ಕೇಳಿತೀರಿ! ಬಲುಮೆಟ್ಟುಗಟ್ಟು"

ಜೀವಪ್ಪಾ— "ಅರ್ಥಾ ನೋಡಿರಿ! ಬಲು ಸೊಗಸು!"

ಬಿದ್ದಾಡಿ—"ಪದ್ದಾಗ ಅಸರಗ್ಗೀ ಅಂದ್ರ ಎಳ್ಳಾನ ಅರ್ಥಾ ಇಲ್ಲಾ! ಮೈಸೂರಾಗ ನೋಡ್ರಿ, ಪದ್ದಾಗ ಪ್ರೀತಿಮಾತ ಬಂದ್ರ ಅಲ್ಲಿನವರು ಬಲು ಬೆಂಕಿ!"

ಕಲ್ಲನಗೌಡಾ— "....ಮೈಸೂರೇನು ನನಗ ಅರೀದ್ದೇನು?...."

ಬಿದ್ದಾಡಿ— (ಹಾಂಗಲ್ಲೋ) "ಅಲ್ಲಿ ದೊಡ್ಡವರಂಬೂ ಅವರು ಸ್ರಿಂಗಾರ ಪಾಡಲ್ಲಂತಿರಬೇಕು. ಅವರಿಗೆ ನಾಟಕದ ತುಂಬ ಗಾದೀ ಮಾತಿರಬೇಕ. ಹೆಂಗಸರೂ ಗಂಡಸರೂ ಸಂಸಾರ ಬಿಟ್ಟು ಮಟಾ ಸೇರತಿರಬೇಕ್. ಬಾವಾಗೂಳ್ ಪದಾ ಇರಬೇಕ್ ಅಂದ್ರ ನಾಟಕಂತ........"

ಈ ಭಾಷ್ಯ ಮೂಲದಲ್ಲಿಲ್ಲ........ ಈ ವಿಮರ್ಶೆ ವೈಯಕ್ತಿಕವಾಗಿರಬಹುದಾದರೂ ಸಾಮೂಹಿಕ ಕಲ್ಪನೆ ಇದರಿಂದ ತೀರ ಭಿನ್ನವೇನೂ ಇದ್ದಂತೆ ಕಾಣುವದಿಲ್ಲ.

ಹೀಗೆಯೇ ಇನ್ನೂ ಒಂದು ಕ್ರಾಂತಿಕಾರಕ ವಿಷಯದ ಬಗ್ಗೆ ನೋಡಬಹುದು. ವಿಧವಾವಿವಾಹದ ಪ್ರಶ್ನೆ. ಚತುರವಾಗ್ಮಿಗಳೂ, ಇಂದಿನ ಪ್ರಸಿದ್ಧ ನಾಟಕಕಾರರೂ ಸಮಾಜದಲ್ಲಿಯ ದಂಭದ ಕಸೆಗೋಲೂ ಆದ ಒಬ್ಬ ಗ್ರಂಥ-ಕರ್ತರ ಕೃತಿಯಲ್ಲಿ ಬರುವ ಸನ್ನಿವೇಶವನ್ನು ನೋಡಬಹುದು.... ಶಾಮನು ವಿಧವಾವಿವಾಹಕ್ಕಾಗಿ ಸಿದ್ಧನಾಗಿದ್ದಾನೆ. ಆದರೆ ಅವನಿಗೆ ಸ್ವೋಪಜ್ಞತೆಯಿಲ್ಲ. ಆಗ ಸಮಾಜದ ಕಸೆಗೋಲಾದ ವಸಂತನು ಅವನಿಗೆ ಯಾವುದಾದರೂ ಸಂಸ್ಥಾನದಲ್ಲಿ ಮದುವೆಯಾಗಲು ಉಪದೇಶಿಸುತ್ತಾನೆ. ಅದರಲ್ಲಿಯೂ ಮೈಸೂರಿನಲ್ಲಿ ಅದಕ್ಕೆ ಕಾರಣವೆಂದರೆ?....ಅದನ್ನು ವಸಂತನ ಬಾಯಿಂದಲೇ ಕೇಳಬೇಕು

ವಸಂತ— ಹಾಗಾದರೆ ಹೀಗೆ ಮಾಡು. ರೂಢಿಯ ವಿರುದ್ಧವಾದ 'ಮದಿವೆ ಇದ್ದರೆ ಒಂದು native state ಇಗೆ ಹೋಗಿ ಬಿಡು. ಉಳಿದ ಕ್ಷೇತ್ರದೊಳಗ ಬರಿಯ ಮುಹೂರ್ತ ತಪ್ಪಿಸಿ ಮದಿವೆ ಮಾಡಿಕೊಳ್ಳದಿದ್ದರ ಈ ಸಂಸ್ಥಾನದಾಗ ಕಾಯಿದೆ ಕೂಡಾ ತಪ್ಪಿಸಿ ಮದಿವೆ ಮಾಡಿಕೊಳ್ಳಲಿಕ್ಕೆ ಬರೋದು. (ತಟ್ಟನೆ ತೋಚಿದಂತೆ) ಆಹಾ! ಸಂಸ್ಥಾನ ಅಂದರೆ ಸಂಸ್ಥಾನ! ಕರ್ನಾಟಕ ಅಂದರೆ ಕರ್ನಾಟಕ! ಮೈಸೂರಿಗೆ ಹೋಗಿಬಿಡೋ ಜಾಣಾ! ಮತ್ತ—ಹುಡುಗಿಗೆ ಎಷ್ಟು ವರ್ಷ ಅಂತ ಯಾರಾದರೂ ಕೇಳಿದರ ಹನ್ನೆರಡೇ

ಅಂತ ಹೇಳು........ ಯಾಕಂದರ— ಅವರ ಸಾಹಿತ್ಯದಲ್ಲಿ ಕೂಡಾ ಹನ್ನೆರಡ ವರ್ಷ ಮೀರಿ ಮದಿವೆ ಆಗೋದಿಲ್ಲ—" ಹಾಗೆಯೇ ಉತ್ತರಕರ್ನಾಟಕದ ಗ್ರಂಥಗಳ ವಿಮರ್ಶೆಯು ಮಾದರಿಯನ್ನು ಮೊನ್ನೆಮೊನ್ನೆಯವರಿಗೆ ನಾವು ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ನೋಡಿದ್ದೇವೆ. ಇವು ಧಾರವಾಡದ ಪ್ರಯೋಗ: ಅರ್ಥವಾಗಲಿಲ್ಲ ಎಂದು ಹೇಳುವುದು ಮೊನ್ನೆಮೊನ್ನೆಯವರೆಗೆ ಸಾಮಾನ್ಯ ವಾಗಿತ್ತು. ಹೀಗೆಂದಾಕ್ಷಣಕ್ಕೆ ಯಾವುದೋ ಒಂದು ವೈಮನಸ್ಯದಿಂದಾಗಲೀ ಇಲ್ಲವೆ ತೆಗಳಿಕೆಯ ಬುದ್ಧಿಯಿಂದಾಗಲೀ ಈ ಮಾತು ಬಂದಿವೆಯೆಂದು ಗ್ರಹಿಸಲಾಗದು. ಅನೇಕ ಕಡೆಗೆ ಈ ಗ್ರಂಥಕರ್ತರಲ್ಲಿ ಈ ಪ್ರದೇಶಗಳ ಬಗ್ಗೆ ಅಭಿಮಾನದ ಮಾತುಗಳೂ ಇವೆ ಆದರೆ ಪ್ರಾದೇಶಿಕ ಐಕ್ಯವಿಲ್ಲದ ಮೂಲಕ, ಜೀವನ ಸಮಸ್ಯೆಗಳು ಭಿನ್ನವಾದ ಮೂಲಕ, ಸಾಹಿತ್ಯದ ವಸ್ತು ಮತ್ತು ವಿಚಾರಸರಣಿ ಭಿನ್ನವಾಗದಿರವು. ಇಜ್ಜೋಡು ಎತ್ತು ಎಂದಿಗೂ ಹೆಜ್ಜೆ ಸಮವಾಗಿ ಹಾಕವು........

ಆದರೆ ಕನ್ನಡದ ಸುದೈವದಿಂದ ಈ ಕಥೆಯೇ ಕೊನೆಯವರೆಗೂ ನಡೆದುಕೊಂಡು ಬರಲಿಲ್ಲ ಗ್ರಂಥಕರ್ತರ ನಡುವೆ ವಿಶೇಷ ಬಳಕೆ ಬಂದಂದಿನಿಂದ ಎಲ್ಲ ರಾಜಕೀಯ ಆರ್ಥಿಕ ಮತ್ತು ಸಾಮಾಜಿಕ ಪ್ರತಿಬಂಧಗಳು ಹಿಮ್ಮೆಟ್ಟಲ್ಪಡುತ್ತಿವೆ. ಸಾಹಿತ್ಯದ ಕೋಶ, ಭಾಷೆ, ವಾಕ್ಯರಚನೆ, ವಿಚಾರ, ವಸ್ತು–ಎಲ್ಲವೂ ನಿಧಾನವಾಗಿ ಏಕರೂಪತೆ ಹೊಂದುತ್ತಲಿವೆ. ಏಕೀಕೃತ ಕರ್ನಾಟಕದ ಸುಂದರ ಕಣಸಿನ ದಿವ್ಯಾಗ್ನಿಯಿಂದ ಪ್ರೇರಿತರಾದ ಅನೇಕ ಕವಿಗಳು ಈ ಹೊಂಗನಸನ್ನು ಎಲ್ಲರಲ್ಲೂ ಬಿತ್ತಲು ಯತ್ನಿಸಿದ್ದಾರೆ

ಆನಂದಕಂದ ಮತ್ತು ಶ್ರೀ ಮುಗುಳಿ ಮುಂತಾದ ಕೆಲವರು ಮಾತಿನ ಮತ್ತು ಬರೆಹದ ಭಾಷೆಯ ಏಕರೂಪತೆಗಾಗಿ ಬಹುಮಟ್ಟಿಗೆ ಹೆಣಗಿದ್ದಾರೆ. ತಮ್ಮ ಕಾವ್ಯಸ್ಫೂರ್ತಿಗೆ ಕೆಲಮಟ್ಟಿಗೆ ಕಾರಣವಾದ ಮೈಸೂರಿಗೆ ದಿವಂಗತ ವಾಸುದೇವಾಚಾರ್ಯರು ೧೯೦೮ರ ಮೊದಲೇ ತಮ್ಮ ಕಾಣಿಕೆಯನ್ನು "ಇಂದಿರೆ" ಕಾದಂಬರಿಯಲ್ಲಿ ಸಲ್ಲಿಸಿದ್ದಾರೆ. ಅಖಂಡ ಕರ್ನಾಟಕದ ಪ್ರಥಮ ಸಂದರ್ಶನವನ್ನು ನಾವಿಲ್ಲಿ ಪಡೆಯಬಹುದು.

ನವರಸಪುರದ ಪ್ರಸಿದ್ಧ ದೇಸಾಯರ ಮನೆತನದವನಾದ ರಮಾ-ಕಾಂತನು ಶ್ರೀರಂಗಪಟ್ಟಣದ ದೇವಯಾನಿಯವರಿಂದ ಆತಿಥ್ಯವನ್ನು ಪಡೆಯುತ್ತಾನೆ. ಬೆಂಗಳೂರು ಶ್ರೀರಂಗಪಟ್ಟಣವೆಂದರೆ ಅವನಿಗೆ ಮೆಚ್ಚು. ಪ್ರಸಿದ್ಧ

ಸುಲ್ತಾನರ ಕಾರ್ಯಕ್ಷೇತ್ರವೂ ನವಕೋಟಿ ನಾರಾಯಣನ ನಿವಾಸಸ್ಥಾನವೂ ಆದ ಶ್ರೀರಂಗಪಟ್ಟಣವು ಪಾಳು ಬಿದ್ದುದನ್ನು ಕಂಡು ಅವನ ಮನಸ್ಸು ಮರುಗುತ್ತದೆ. ಸುಲ್ತಾನನ ಕಬರಸ್ತಾನ, ದರ್ಯಾದೌಲತ್ ಮತ್ತು ಪಶ್ಚಿಮವಾಹಿನಿಗಳನ್ನು ಕಂಡು ಅವನ ನೆನಹು ಕಣ್ಣೀರ್ದುಂಬುತ್ತದೆ.

ಆಚಾರ್ಯರು ಆ ಆ ಪ್ರದೇಶಗಳನ್ನು ವರ್ಣಿಸಿ ತಮ್ಮ ಪ್ರಶಂಸೆಯ ಕಾಣಿಕೆಯನ್ನು ಸಲ್ಲಿಸಿದ್ದರೆ, ಅ. ನ. ಕೃಷ್ಣರಾಯರು ಅದಕ್ಕೂ ಒಂದು ಹೆಜ್ಜೆ ಮುಂದು ಹೋಗಿದ್ದಾರೆ. ಕಲಾವಿದರಾದ ಅವರ ನಾಯಕರು ಮೈಸೂರಲ್ಲಿ ಜನ್ಮವೆತ್ತಿದ್ದರೂ ಅಖಂಡಕರ್ನಾಟಕವನ್ನು ಸುತ್ತಿದ್ದಾರೆ ಈ ರೀತಿ ನೋಡಿದರೆ ಅ. ನ. ಕೃ. ಅವರ ನಾಯಕರೆಲ್ಲರೂ ಹೊರಗಿನಿಂದ ಅಧಿಕ ಸ್ಫೂರ್ತಿಯನ್ನು ಪಡೆದದ್ದನ್ನು ಕಾಣಬಹುದು. ಸಂಧ್ಯಾರಾಗದ ಲಕ್ಷ್ಮಣನ ಹಿರಿಯಗುರು ತಂಜಾವರದ ಕೃಷ್ಣಅಯ್ಯರರು. ಸಾಹಿತ್ಯರತ್ನದ ಮೂರ್ತಿ ಹಂಬಲಿಸಿ ಆತ್ಮವಿಕ್ರಯಮಾಡಿಯಾದರೂ ಬೆಳಗಾವಿ ಸಾಹಿತ್ಯಸಮ್ಮೇಲನಕ್ಕೆ ಹೋಗಲು ನಿಶ್ಚಯಿಸುತ್ತಾನೆ. ಬೆಳಗಾವಿ ಸಮೀಪಿಸಿದಂತೆ ಅವನಿಗೆ ಭಾಷೆ ಅರ್ಥವಾಗುವುದು ಕಷ್ಟವಾದರೂ ಉತ್ತರ ಕರ್ನಾಟಕದ ಸಮುಸ್ಯೆ ಗಾಡಿಯಲ್ಲಿಯೇ ತನ್ನ ತಾಂಡವರೂಪವನ್ನು ತೋರಿಸುತ್ತದೆ. ಅವನಲ್ಲಿ ಹುದುಗಿದ ಕನ್ನಡತನವು ಅವನಿಗೆ ಸರಿಯಾದ ಮಾರ್ಗವನ್ನುತೋರಿಸುತ್ತದೆ. ಈ ಸಮ್ಮೇಲನದಲ್ಲಿಯ ಮಾಸ್ತಿಯವರ ಮಾಧುರ್ಯ, ಶ್ರೀಯವರ ಕಂಠಶ್ರೀ, ಬೇಂದ್ರೆ ಅವರ ಗಾರುಡಿ, ರಾಮಚಂದ್ರರಾಯರ ಇಂಚರ ಇವೆಲ್ಲ ಅವನ ಮೇಲೆ ನಿರಂತರವಾದ ಪರಿಣಾಮವನ್ನುಂಟುಮಾಡುತ್ತವೆ. ತಿರುಗಿ ಹೊರಟಾಗ ಮೂರ್ತಿ ಕಂಡದ್ದು "ಕನಸಲ್ಲ; ಒಂದು ಕಣಸು. ಸಮಗ್ರ ಕರ್ನಾಟಕದ ಒಂದು ಸುಂದರ ಚಿತ್ರ. ತನ್ನ ಹೃದಯ ತಂತಿ ಮೈಸೂರಿನಲ್ಲಿ ಮಾತ್ರವಲ್ಲ, ಮಂಗಳೂರು ಧಾರವಾಡ ಹೈದರಾಬಾದು ಮುಂಬಯಿ ಎಲ್ಲ ಕಡೆಗೂ" ಮಿಡಿಯುತ್ತಿದೆಯೆಂಬ ಸತ್ಯವು ಅವನಿಗೆ ಗೋಚರಿಸುತ್ತದೆ. ಬೆಳಗಾವಿ ಅವನಿಗೆ "ಎರಡನೇ ಶಾಂತಿನಿಕೇತನವಾಗುತ್ತದೆ".

ನಟಸಾರ್ವಭೌಮರಾಜುವಿಗೂ ಸಮಗ್ರ ಕರ್ನಾಟಕಕ್ಕೆ ತನ್ನ ಕಲೆಯನ್ನು ತೋರಿಸಬೇಕೆಂಬ ಹಂಬಲವಿದೆ. ದಾವಣಗೆರೆ, ಹುಬ್ಬಳ್ಳಿ, ಧಾರವಾಡ ಅಥಣಿಗಳಲ್ಲಿ ತಮ್ಮ ನಾಟಕವನ್ನು ಅಭಿನಯಿಸಬೇಕೆಂಬ ಇಚ್ಛೆ. ಧಾರವಾಡದಲ್ಲಿ ಶಾಕುಂತಲವನ್ನು ಪ್ರದರ್ಶಿಸಿಯೂ ಆಯಿತು. "ಧಾರವಾಡದ ನಾಗರಿ

ಕರು ಶಾಕುಂತಲ ನಾಟಕವನ್ನು ಬಹಳ ಮೆಚ್ಚಿಕೊಂಡರು; ರಾಜುವಿಗೂ ಅವನ ಪರಿವಾರಕ್ಕೂ ಉತ್ತರ ಕರ್ನಾಟಕದ ಕಲಾಭಿಮಾನಿಗಳು ಸತ್ಕಾರ ಕೂಟಗಳನ್ನೇರ್ಪಡಿಸಿ ಗೌರವಿಸಿದರು— " ರಾಜುವಾದರೂ ಮನುಷ್ಯನು ಬರಿಯ ಚೌಕಾಸಿವೃತ್ತಿಯಲ್ಲಿ ಹೋರಾಡುತ್ತಿಲ್ಲ ಒಂದು ದಿವ್ಯತರವಾದ ಆಕಾಂಕ್ಷೆಯು ಅವನ ಎದೆಯ ಚಿಲುಮೆಯನ್ನು ಕುದುರಿಸುತ್ತಿದೆಯೆಂಬುದನ್ನು ಇಲ್ಲಿಯೇ ಕಂಡು ಕೊಂಡನು.

We travel not for tafficking alone; By hotter winds our fiery hearts are fanned. ಎಂದು

ಸಹಜವಾದ ಇಂಥ ನಿರೂಪಣೆಯಿಂದ ಆದಷ್ಟು ಏಕೀಕರಣದ ಕಾರ್ಯವು ಮತ್ತೇತರರಿಂದಲೂ ಆಗದು. ಮೂರ್ತಿ ಮತ್ತು ರಾಜರು ಏಕೀಕೃತ ಕರ್ನಾಟಕದ ದಿವ್ಯಕಣಸಿಗರಾಗಿದ್ದಾರೆ. ಅದರ ಆದರ್ಶ ನಾಗರಿಕರಾಗಿದ್ದಾರೆ.

ಈ ದೃಷ್ಟಿ ಬರಿಯ ಕಾದಂಬರೀಪ್ರಪಂಚಕ್ಕೆ ಮಾತ್ರ ನಿಂತಿಲ್ಲ; ಮುಗಳಿ ಅವರ ಏಕೀಕರಣ ನಾಟಕವಲ್ಲದೆ ಉತ್ತರ ಮತ್ತು ದಕ್ಷಿಣದ ಅನೇಕ ಉದ್ದಾಮಕವಿಗಳು ಸಮಗ್ರ ಕರ್ನಾಟಕದ ಈ ದಿವ್ಯ ಕಣಸನ್ನು ಜನತೆಗೆ ನೀಡಿದ್ದಾರೆ.

ಬೇಂದ್ರೆ ಅವರು ಕನಸಿನಲ್ಲಿಯು ಕಣಸಿನಲ್ಲಿ ಕನ್ನಡದ ಸೇವೆಗಾಗಿ "ಗಂಡುಸಾದವರ ಬಲಿ"ಯನ್ನು ಕೇಳಿದ್ದರೆ, ಶ್ರೀ ಗೋಕಾಕ ಅವರು "ಧವಳ ಗಿರಿ ಗಂಗೆಯನು ಆಮಂತ್ರಿಸಲು ಹೊರಟ ಕನ್ನಡತಾಯಿ ಕೃಷ್ಣೆಗಿಹ ಸೌಹಾರ್ದವನ್ನು" ಕೂಡ ಕಳೆದುಕೊಂಡು, ಅವರು ಹೊರಮನೆಯ ಬಾಣಸಿಗರಾಗಿ ನೆಲಸಿದ್ದುದನ್ನು ಕಂಡು ಕಂಬನಿದುಂಬಿದ್ದಾರೆ. "ಹುಲುಸಾದ ಬೆಳೆ ಹೋಗಿ ಹುಲ್ಲುಕೊಳೆ ತುಂಬಿದ" ನಾಡಿನಲ್ಲಿ ಪುಲಿಕೇಶಿ ದಂತಿ ಚೆನ್ನಮ್ಮರ ಸಿರಿ ಪುನಃ ಸೂರೆಗೈಯಲೆಂದು ಮುಗಳಿ ಅವರು ಪ್ರಾರ್ಥಿಸಿದ್ದಾರೆ. ನಾಡಿನ ಕಾರಣಪುರುಷನ ಬರವನ್ನು ಸೂಚಿಸುವ ದಿವ್ಯ ದಿಗಂತಕ್ಕೆ ಮಣಿದು ಪ್ರಾರ್ಥನೆಬೇಡಿದ್ದಾರೆ. ಮಾಸ್ತಿ ಅವರು "ನಾವು ಸ್ವಾಮಿ ಮೈಸೂರು ಧಾರವಾಡ" ಇವುಗಳ ಬದಲು "ಕನ್ನಡಿಗ" ಎಂಬ ಉತ್ತರ ಬರಲು ಹಾರೈಸಿದ್ದಾರೆ. ಅಖಿಲ ಕನ್ನಡ ನಾಡನ್ನು ಸಂಚರಿಸಿ ಕನ್ನಡ ತಾಯಿಯ ದೂಳವನ್ನು ಶಿರದಲ್ಲಿ ಆಂತ ಶ್ರೀಅವರು ಕನ್ನಡದ ಪುರೋಹಿತರಾಗಿ ತಾಯಿಯ ಸಮಗ್ರ ದರ್ಶನವನ್ನು ತೋರಿಸಿದ್ದಾರೆ:—

"ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ. ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರಯಾತ್ರೆಯಲಿ. ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು! ಕನ್ನಡದನಾಡು! ಬಳಸಿದೆನು, ಸುತ್ತಿದೆನು, ಕಣ್ದಣಿಯ ನೋಡಿದೆನು, ಕುಣಿದು ಹಾಡಿದೆನು"

ಚೆಲುವು ಕಣಿ ಕಾರ್ವಾರವೆದೆ ತುಂಬಿ, ಗೋಕರ್ಣದಲಿ ಮಿಂದು. ಸಂದು, ಉಡುಪಿಯಲಿ ಕೃಷ್ಣಂಗೆ ಕೈಮುಗಿದು, ಮಂಗಳೂರಿನ ಸಿರಿಯ ನಂಟರಲಿ ನಿಂದು, ಚಾರ್ಮಾಡಿ ಘಾಟಿಯನು ಬಳಸಿ ಉತ್ತರದ ಮಲೆನಾಡ ಮತ್ತು ಬೆಳುವಲದ ಸೌಂದರ್ಯವನ್ನು ನೋಡಿದರೆ ಕನ್ನಡಕ್ಕೆ ಯಾವ ಕೊರತೆ ಎನಿಸುತ್ತದೆ? ಎಲ್ಲಿ ನೋಡಿದಲ್ಲೂ ಚೆಲುವ ನಗೆ; ಸಂತಸದ ಊಟ. ಭಕ್ತಿವಿನಮ್ರರಾದ ಕನ್ನಡಿಗರಿಗೆ ತಾಯ ನಗೆನೋಟ ಕಾಣುತ್ತದೆ:— "ನಕ್ಕಳಾ ತಾಯಿ— ಮುದುಕಿ ಎಳೆಯುವಳಾಗಿ ಮಾಸು ಮಿಂಚೆಳೆಯಾಗಿ, ಸವಿಪ ವ್ಯೆತುಂಬಿ, ಕಡಲ ತೆರೆಗಳನುಟ್ಟು, ಬೆಟ್ಟ ಬಯಲನು ತೊಟ್ಟು, ಅರಿಲ ಮುಡಿಗಿಟ್ಟು, ಮುಗುಳ್ ನಗೆಯ ನಸುನಕ್ಕಳಾ ತಾಯಿ— ನನ್ನ ತಲೆಯಲಿ ಕೈಯ ತಾವರೆಯನಿಟ್ಟು—"

ಈ ವಿಚಾರ ಬರಿಯ ಭಾವನೆಯಾಗಿರದೆ ಪರಸ್ಪರ ಭಾಗಗಳ ಪ್ರೀತಿಯ ಮೂರ್ತ ಸ್ವರೂಪವನ್ನೂ ಪಡೆದಿದೆ.

"ಸ್ವಚ್ಛಂದ ನಿರ್ಬಂಧ ಸ್ವಾತಂತ್ರ್ಯದಲ್ಲಿ ನೀರ ಸೀಮಾರೇಖೆಯನ್ನು ತೀಡುವ" ಭಾಟಘರ ಸಾಗರಕ್ಕೂ ಅದರ ಪಾದದೆಡೆ "ಧೂರ್ತ ವಿನಯದಲಿ ಕುಳಿತ ಭಾಟಘರ ಸಾಗರದ ಅಣೆಕಟ್ಟಿಗಾಗಿಯೂ ಬೇಂದ್ರೆ ಅವರಿಗೆ ವಿಸ್ಮಯಾಭಿಮಾನವಿದೆ:—"ಎಂತು ಪ್ರಕೃತಿ ಪ್ರಚಂಡ; ಅಂತೆ ಮಾನವನ ಕೃತಿ!" —ತನ್ನ ತೋಳತೊಟ್ಟಿಲಲಿರಿಸಿ, ನಾಲಗೆಗೆ ನುಡಿಕಲಿಸಿದ ಧಾರವಾಡ ತಾಯ ವಿಷಯವಾಗಿ ಅವರಿಗೆ ಆದರ ವಿಶ್ವಾಸಗಳಿದ್ದರೂ ಮ್ಯೆಸೂರ ಬಗ್ಗೆಯೂ ಹೆಮ್ಮೆಯಿದೆ:—

"ಮ್ಯೆಸೂರ ಮ್ಯೆಸಿರಿಯು ಸೂರೆಗೊಂಬುದು ಮನವ
ಮ್ಯೆಚಿನ್ನ ನಗೆಮಿಂಚು ಬಾವನ್ನದುಸಿರು
ನಯದ ವಿನಯದ ನಡೆಯು ಮಾತು ಸಂಗೀತ;
ಏನು ಸೊಗಸಿದು! ಎನಿತು ಸೊಬಗಿದು ಗೆಳೆಯ!"

ರಾಮಚಂದ್ರರಾಯರು "ರಾಮಣೀಯಕದ ನಿಲಯುಮಾದ" ಕೊಡಗಿನ ಬೆಡಗಿಗೆ ಮಾರುಹೋಗಿದ್ದಾರೆ:—ಕೊಡಗು ಬೆಡಗಿನ ಬೀಡು! ಸೌಂದರ್ಯದ ವೃತ್ತಂ ಕುಡಿಯಿಮೆಲೆ ಕಣ್ಗಳಿರ! ಇದೊ ಮಂಜು ಬಿತ್ತರಿಸಿ ಕಡಲವೋಲ್ ತೋರ್ಪುದು ಮೇಲೆಳ್ದ ಗಿರಿಸಾನುಗಳ್ ದ್ವೀಪನಿವಹಮಾಗೆ. ಕೊಡಗು "ತಣ್ಣೆಳಲ ತವರೂರು ತಣ್ಪಿನಿಂಬು" ಭಾವನೆಗೆ ನಿಲುಕವ ಚೆಲುವುಳ್ಳದು.

ಈ ರೀತಿ ಏಕೀಕೃತ ಕರ್ನಾಟಕದ ದಿವ್ಯ ದರ್ಶನದಿಂದ ಹರ್ಷ ನಿರ್ಭರರಾದ ಈ ಕವಿಗಳೆಲ್ಲರೂ ಬರಲಿರುವ ಬೆಳಗಿನ ಮಂಗಲ ಗೀತೆಯನ್ನು ಈಗಾಗಲೇ ಹಾಡಿದ್ದಾರೆ. ಕರ್ನಾಟಕವಿನ್ನು ಬರಿಯ ಸಾಹಿತ್ಯದಲ್ಲಿ ಮಾತ್ರ ಏಕೀಕೃತ ಪ್ರಾಂತವಾಗಿರದೆ, ಒಂದೇ ರಾಜಕೀಯ, ಒಂದೇ ಆಧಿಪತ್ಯಗಳಿಗೆ ಒಳಗಾಗಿ ತನ್ನ ಜೀವನವನ್ನು ಇದಕ್ಕೂ ಹೆಚ್ಚು ಉದಾತ್ತವಾಗಿ ಮಾಡಿಕೊಳ್ಳಬೇಕು ಒಡೆದ ಕರ್ನಾಟಕ ರತ್ನಸಿಂಹಾಸನವು ಒಂದುಗೂಡಿ ಪುನಃ ತನ್ನ ಕೀರ್ತಿಧ್ವಜವನ್ನು ಮೆರೆಯಿಸಬೇಕು "ಸಿಡಿದ ಪೂರ್ವವೈಭವದ ಉಃಶಾಪ ಕೋರುವ ಕಲ್ಲು" ಜೀವಕಳೆ ಪಡೆಯಬೇಕು ಜನತೆಯೆಲ್ಲ ಮನಸ್ಸು ಮಾಡಿದರೆ ಯಾವುದು ತಾನೆ ದುಸ್ಸಾಧ್ಯ? ಪ್ರಾಮಾಣಿಕವಾದ ಸುಪ್ರಯತ್ನಕ್ಕೆ ಎಂದಿಗೂ ಭಂಗಬರಲಾರದು.... ಅಂತಹ ಮಂಗಲ ಪ್ರಭಾತವು ಬೇಗನೆ ಬರಲಿ; ಕನ್ನಡದ ಕಣಸು ನನಸಾಗಲಿ! ೧೩–೭–೪೫

---

# ಹರಟೆ ಅಥವಾ ನಿಬಂಧವೆಂದರೇನು? —*

"ಗೊಡ್ಡು ಹರಟೆ", "ಕಾಡು ಹರಟೆ". "ಹಾಳು ಹರಟೆ ಕೈಯಲ್ಲಿ ಪರಟೆ"— ಎಂದು ಮೊದಲಾಗಿ ನಾವು ಹರಟೆಯನ್ನು ಸಾಮಾನ್ಯವಾಗಿ ಹೀಯಾಳಿಸಿದರೂ ಹರಟೆಯನ್ನು ಹೊಡೆಯುವುದನ್ನು ಯಾರೂ ನಿಲ್ಲಿಸಿಲ್ಲ. ರಾಮಾಯಣದಂತೆ ಹರಟೆ ತಲೆಬುಡವಿಲ್ಲದೆ ಬೆಳೆಯುತ್ತಲೇ ಇದೆ. ಹರಟೆ ಹೊಡೆಯುವುದು, ಕಥೆ ಹೊಸೆಯುವುದು ಮನುಷ್ಯ ಸ್ವಭಾವವಾಗಿವೆ. ಸ್ವತಃ ಹರಟೆ ಹೊಡೆಯಲು ಬಾರದಿದ್ದವರೂ ಕೂಡ ಹರಟೆಯನ್ನು ಕೇಳಿ, ಹೊಡೆಸಿ, ಆನಂದಪಡುತ್ತಿದ್ದಾರೆ. ಬದನೆಕಾಯಿ, ವಾದಿ-ರಾಜ ಗುಳ್ಳವಾದರಾಯಿತ್ತು; ತಿನ್ನಲು ಅಭ್ಯಂತರವಿಲ್ಲ.

ಹಾಗಾದರೆ ಈ ಹರಟೆಯೆಂದರೇನು? ಅದರಲ್ಲಿ ನಮಗೆ ಇಷ್ಟು ಉತ್ಸಾಹವೇಕೆ?— ಎಂಬುದನ್ನು ಚರ್ಚಿಸುವುದೇ ಇಂದಿನ ನನ್ನ ಉದ್ದೇಶವಾಗಿದೆ. ಕನ್ನಡದಲ್ಲಿ ಅದು ಬೆಳೆದ ರೀತಿ ಈಗ ಪ್ರಸ್ತುತವಲ್ಲ.

"ಹರಟೆ" ಎಂಬುದನ್ನು ನಾವು ಇಂದು ಉಪಯೋಗಿಸುವದು ಇಂಗ್ಲಿಷದ "essay" ಎಂಬುದರ ಪರ್ಯಾಯ ಪದವಾಗಿ. ಹಿಂದಿನ ನಮ್ಮ ಕವಿಗಳು ರಾಜರ "ಸುಖ ಸಂಕಥಾ ವಿನೋದದಲ್ಲಿ" "ಹರಟೆ" ಹೊಸೆದಿರಬಹುದಾದರೂ ಗ್ರಂಥಸ್ಥರೂಪವಾಗಿ ಅದು ಬಂದುದು ಇತ್ತೀಚೆ ಮಾತ್ರ. ಇಂಗ್ಲಿಷದಿಂದ ಆಮದುವಾಗಿ ಬಂದ ಅನೇಕ ಸರಕುಗಳಂತೆ "ಹರಟೆ"ಯು ಕೂಡ ಹಡಗು ಇಳಿದು ಬಂದುದೇ. ಕನ್ನಡಕ್ಕೆ ಇಂಗ್ಲಿಷ್ ಸಂಪರ್ಕ ಬಾರದಿದ್ದಲ್ಲಿ "ಹರಟೆ" ಇನ್ನೂ 'ಕಾಡಾಗಿ', ಬಹುಶಃ ಸಾಹಿತ್ಯರೂಪವನ್ನು ಕಾಣದೆ ಇರುತ್ತಿತ್ತು.

ಹಾಗಾದರೆ ಪುನಃ ಅದೇ ಪ್ರಶ್ನೆ: 'ಹರಟೆ' ಎಂದರೇನು?— ವ್ಯಾಖ್ಯೆ ಹೇಳುವುದು ಯಾವಾಗಲೂ ಕಠಿಣ ಸಾಧ್ಯ. ವ್ಯಾಖ್ಯೆ ಜ್ಞಾನದ ಆದಿ: ಅಂತ್ಯ; ಬೀಜ: ಹಣ್ಣು; ಒಂದು ವಿಷಯವನ್ನು ಪೂರ್ಣ ಗ್ರಹಿಸಿದಹೊರತು ಅದರ ವ್ಯಾಖ್ಯೆ ಹೇಳಲು ಸಾಧ್ಯವಿಲ್ಲ; ಒಂದು ವ್ಯಾಖ್ಯೆಯಿಂದ ಮೊದಲು ಮಾಡಿದ ಹೊರತು ವಿಷಯ ಪ್ರವೇಶವಾಗುವಂತಿಲ್ಲ. ತುಳಿಯದೆ ದಾರಿ ಬೀಳದು;

---

* ಹುಬ್ಬಳ್ಳಿಯ ವಿಚಾರಸಂಕಿರಣದಲ್ಲಿ ಮಾಡಿದ ಒಂದು ಭಾಷಣ.

ದಾರಿಬೀಳದೆ ತುಳಿಯುಲಾಗದು. ಅದರಲ್ಲಿಯೂ 'ಹರಟೆ' ಅಥವಾ 'ನಿಬಂಧ'ದ ವಿಷಯು ತುಂಬಾ ಕಷ್ಟದಾಯಕವಾಗಿದೆ. ಯಾಕೆಂದರೆ ನಿಬಂಧವೆಂದರೇನೆಂಬುದನ್ನು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ಆ ಪದವನ್ನು ಬಹುವಿಧವಾಗಿ ಉಪಯೋಗಿಸಲಾಗಿದೆ.

ಒಂದು ಕಡೆಗೆ ಮಾಸ್ತಿ ಮೆಕಾಲೆ ಅವರ ವಿಮರ್ಶಾತ್ಮಕ ನಿಬಂಧಗಳಿದ್ದರೆ, ಮತ್ತೊಂದು ಕಡೆಗೆ ಗಿಬನ್ ಮುಳಿಯೆ ತಿಮ್ಮಪ್ಪಯ್ಯನವರ ಪುಸ್ತಕದಷ್ಟು ಗಾತ್ರದ ಪ್ರಬಂಧಗಳಿವೆ. ಒಂದುಕಡೆಗೆ ಬೇಕನ್ನ ಹೊನ್ನಾಪುರಮಠರ ನೀತಿಮಂಜರಿಯಿದ್ದರೆ, ಮತ್ತೊಂದೆಡೆಗೆ ಎನ್ಕೆ ಅವರ ಮುಂಗಾಲ್ಪುಟಿಗೆಯಿದೆ ಅಂದ ಮೇಲೆ ನಿಬಂಧವೆಂದರಾವುದು ? ಅದೂ ಅಲ್ಲದೆ ಪೋಪ್ ಮಹಾಕವಿಯು ಬರೆದ "Essay on Man" ಎಂಬುದು ಗದ್ಯರೂಪದಲ್ಲಿ ಕೂಡ ಇಲ್ಲ; ಪದ್ಯದಲ್ಲಿದೆ

ಅಂದ ಮೇಲೆ ನಿಬಂಧವೆಂದರೇನು ? — ಇಂಗ್ಲಿಷ್ ಸಾಹಿತ್ಯದ ಸುಪ್ರಸಿದ್ಧ ವಿಮರ್ಶಕರಾದ ಡಾ. ಜಾನ್ಸನ್ ಅವರು ನಿಬಂಧದ ವ್ಯಾಖ್ಯೆಯನ್ನು ಈ ರೀತಿ ಹೇಳಿದ್ದಾರೆ:— "An essay is a loose sally of the mind; an irregular indigested piece" ಎಂದು.

ಇಂಗ್ಲಿಷ್ 'essay' ಶಬ್ದವೇ "assay" ಪ್ರಯತ್ನ ಮಾಡು ಅಂದರೆ ಸಂಪೂರ್ಣವಾಗಿ ವಿವರಿಸದೆ ಕೆಲಮಟ್ಟಿಗೆ ಮಾತ್ರ ಹೇಳು ಎನ್ನುವದರಿಂದ ಬಂದಿದೆ. ತನ್ನ ನಿಬಂಧಗಳು "ತೂರಿದ ಚಿಂತನೆಗಳೆಂದು" (dispersed meditations) ಎಂದುಕೊಂಡ ಬೇಕನ್ನನಲ್ಲಿಯೂ ಕೂಡ ಅವನ ಆತ್ಮಾಭಿವ್ಯಕ್ತಿಯನ್ನು ಕಾಣದಿಲ್ಲ.

Alexander Smith ಅವರು ನಿಬಂಧದಲ್ಲಿ ಕವಿಯ ಭಾವವೇ ಮುಖ್ಯವೆಂದು ಹೇಳುತ್ತಾರೆ. "Give the mood and the essay from the first sentence to the last grows round it as the cocoon grows around the silkworm ಎಂದು.

ಆದ್ದರಿಂದ ಒಂದು ವಿಷಯುವನ್ನು ನಿಬಂಧನಕಾರನು ಸಂಪೂರ್ಣವಾಗಿ ಚರ್ಚಿಸಿ ಅವರ ಲಾಭಹಾನಿಗಳನ್ನೆಲ್ಲ ಹೇಳಬೇಕೆಂಬ ನಿರ್ಬಂಧವಿಲ್ಲ. ನಿಬಂಧನಕಾರನು ಪಂಡಿತನಾಗಿರಲೇಬೇಕೆಂಬ ಅವಶ್ಯಕತೆಯಿಲ್ಲ. ವ್ಯಕ್ತಿತ್ವ ಮತ್ತು ನಿರ್ವಹಣವಿದ್ದರೆ ಸಾಕು. ಎಂಥವರೂ ಒಳ್ಳೇ ನಿಬಂಧನಕಾರರಾಗಬಹುದು.

Prof Orlo Williams ಅವರೂ ಇದೇ ಮಾತನ್ನೇ ಹೇಳುತ್ತಾರೆ. The essayist handles the theme not like a professor: but like an artist."

ಈಯೆಲ್ಲ ವಿವರಣೆಯಿಂದ ಒಂದು ಮಾತು ಮಾತ್ರ ಸ್ಪಷ್ಟ. ನಿಬಂಧದ ಬೆಲೆ ವಸ್ತುವಿನ ಅನ್ವೇಷಣೆಯಲ್ಲಿ ಇಲ್ಲ; ಬರೆಯುವ ಕೈಯಲ್ಲಿ ಇದೆ. ಬರೆದ ವಿಷಯದಲ್ಲಿ ಇಲ್ಲ; ಬರೆಯುವ ಬಗೆಯಲ್ಲಿ ಇದೆ. ಪ್ರಮುಖವಾದದ್ದು ವಿಷಯವಲ್ಲ; ಲೇಖಕನ ವ್ಯಕ್ತಿತ್ವ ಅದರಲ್ಲಿ ಮನಸ್ಸನ್ನು ಹಿಡಿಯುವಷ್ಟು ಸಾಮರ್ಥ್ಯವಿದ್ದಷ್ಟೂ ನಿಬಂಧದ ಯಶಸ್ಸಿದೆ; ಸಾಫಲ್ಯವಿದೆ. ಅಂತಲೇ, ಒಡೆದ ಕನ್ನಡಿಯನ್ನು ಮೊದಲುಮಾಡಿಕೊಂಡು ಒಂಕಾರದ ವರೆಗೆ, 'ದಸ್ತುಬೀನು' ಮೊದಲು ಮಾಡಿಕೊಂಡು ದಲಿತರ ಉದ್ಧಾರದ ವರೆಗೆ ಕವಿಯು ಬರೆಯಬಲ್ಲ. ಒಂದು ಊಹೆಯ ಎಳೆಯೋ. ಅನುಭಾವದ ಸುಳಿಯೋ, ಅನುಭವದ ಪಡಿನುಡಿಯೋ— ಯಾವುದಾದರೂ ಸಿಕ್ಕರೂ ಸಾಕು; ರೇಶಿಮೆಹುಳು ಒಡಲಿನಿಂದಲೇ ರೇಶಿಮೆಯನ್ನು ಸುತ್ತುವಂತೆ ನಿಬಂಧ ಹೆಣೆದುಕೊಳ್ಳುತ್ತದೆ ಅಂತಲೇ "An essay is lyric in prose" –ನಿಬಂಧ ಗದ್ಯದ ಭಾವಗೀತೆ—ಎಂದು ಹೇಳುವದುಂಟು. ಅದಕ್ಕೆ ಇಂಥವೇ ವಿಷಯ ಬೇಕೆಂಬ ನಿರ್ಬಂಧವಿಲ್ಲ. ಊಹೆ, ಎನಿಸಿಕೆ, ಅನುಭವ, ಅನುಭಾವ ವಿಡಂಬನ— ಯಾವುದೂ ಹರಟೆಯ ವಸ್ತುವಾಗಬಹುದು.

ರಾಬರ್ಟಲಿಂಡ್ ಅವರು ಕ್ಷೌರದಲ್ಲಿ ಕೂಡ ಜಗತ್ತಿನ ತತ್ವವನ್ನು ಕಂಡಿದ್ದಾರೆ. ಒಂದು ಸುಖರೂಪವಾದ ಕ್ಷೌರವಾಗಬೇಕಾದರೂ ಕೂಡ ಎಷ್ಟು ಕಠಿಣವಾದದ್ದೆಂಬುದು ಅನುಭವಿಸಿದವರಿಗೆ ಮಾತ್ರ ವೇದ್ಯ. ಒಂದು ಸುಖರೂಪವಾದ ದಾಡಿಯಾಗಬೇಕಾದರೆ ಎಷ್ಟು "ಕೈ" ಕೂಡಬೇಕು. ರೇಝರ ಅಂತೂ ಸರಿಯೇ. ಆದರೆ, ಬರಿಯ ರೇಝರ ಮಾತ್ರ ಸಾಲದು. ಸ್ವಲ್ಪ ಗೊರಸು ಗಡ್ಡವಿದ್ದರೆ, ಆ ಪಾಪ ದೇವರಿಗೇ ಬರಬೇಕೇ ವಿನಾ ಮನುಷ್ಯನಿಗೆ ಬರಬಾರದು. ಅದಕ್ಕಾಗಿ ಒಳ್ಳೇ 'ಬ್ರಶ್' ಬೇಕು. ಮೆದುವಾದ ಸಾಬೂನ ಬೇಕು. ಒಂದೇ ಎರಡೆ ? ಹೀಗಾಗಿ ಆ ರೇಝರು, ಆ ಬ್ರಶ್ಶು, ಆ ಸಾಬೂನು—ಈಯೆಲ್ಲ "ಕೈ ಕೂಡಿದಾಗ" ಮಾತ್ರ ಒಂದು ಸುಖರೂಪವಾದ ಹಜಾಮತಿ.... ಇಲ್ಲದಿದ್ದರೆ ಈ ಸಂಕಟ ದೇವರಿಗೇ ಗೊತ್ತು...... ಹೀಗೆಯೇ ಜೀವನ! ಇಲ್ಲಿಯೂ ರೇಝರ್, ಬ್ರಶ್, ಸಾಬೂನುಗಳು ಸಹ

ಕಲಿಸಿದರೇ ಬಾಳು ಸಾಧ್ಯ. ಯಾವುದೊಂದೂ ಏನೂ ಮಾಡದು. ಬರಿಯ ಒಂದು Socialism ಬರಿಯ ಒಂದು communism ಒಂದು feminism-ಯಾವ ಒಂದು "ಇಝುಮ್ಸ್" ನಮ್ಮನ್ನು ಮುಂದೊಯ್ಯವು. ಮನುಷ್ಯ ಬದುಕಬೇಕಾದರೆ ಜೀವನದ ಸಮಗ್ರತೆಯನ್ನು ಅರಿತಿರಬೇಕು. ಒಂದನ್ನೇ ಸಾರಿಹೇಳುವುದು ತಪ್ಪು ಅವಧಾರಣೆ....... ಇದು ನಿಬಂಧದ ರೀತಿ. ಹೀಗಾಗಿ ನಿಬಂಧಕಾರನಿಗೆ ಇಂಥ ವಿಷಯವೇ ಬೇಕೆಂದಿಲ್ಲ. ಕಾಣುವ ಕಣ್ಣಿದ್ದರೆ ಅಣುವಿನಿಂದ ಆತ್ಮದವರೆಗೆ ಯಾವ ದಿವ್ಯ ತತ್ವವನ್ನೂ ಕಾಣಬಹುದು.

ಎನಿಸಿಕೆಯಂತೆಯೇ ಊಹೆ. ತನ್ನ ಕಲ್ಪನೆಯಲ್ಲಿ ಕವಿ ಯಾವ ವಿನೋದದ ಸುಳಿಯನ್ನೂ ಕೆತ್ತಬಹುದು. ಮೂರ್ತಿರಾಯರ ಕುಂಚುಕರಟು ನಮಗೆ ಚಿರಪರಿಚಿತ. ಆಂಗ್ಲ ಸಾಹಿತ್ಯದಲ್ಲಿ ಈ ವಿಭಾಗದಲ್ಲಿ ಲ್ಯಾಂಬ್ ಎತ್ತಿದ ಕೈ. ಅವನಲ್ಲಿ ಊಹೆ, ವಿನೋದ ತಾವೇ ತಾವಾಗಿ ತಾಂಡವವಾಡು ತ್ತವೆ. ಸಪ್ತಸ್ವರ್ಗಗಳನ್ನು ದಾಟಿ ಸುವರ್ಣ ಮಂದಿರಕ್ಕೆ ಕೈಮಾಡಿ ಕರೆ ದೊಯ್ಯುತ್ತವೆ. ಪದಾರ್ಥ ಬೇಯಿಸಿ ತಿಂದರೆ ಹೆಚ್ಚು ರುಚಿಯಾಗುತ್ತದೆಂದು ಮಾನವನು ಕಂಡ ಬಗೆಯನ್ನು ಲ್ಯಾಂಬ್ ವಿವರಿಸಿದ ರೀತಿ ನೀವು ನೋಡಿರ್ಪ ವಿರಾ? ಹಾಗಿದ್ದರೆ ಅವನ "Dissertation upon Roast pig" ಓದಿರಿ. ಆ ಚೀನಿ ಕಥೆಯನ್ನು ಅರಿತು ಕೊಳ್ಳಿರಿ.... "ಹೋ-ಟಿ" (ಹೊಟ್ಟೆಯಲ್ಲಿ) ಒಬ್ಬ ಚೀನೀ ಮನುಷ್ಯ. ಅವನು ಹೊಲದಲ್ಲಿ ಕೆಲಸಮಾಡಲು ಹೋದಾಗಲೆಲ್ಲ ತನ್ನ ಮಡ್ಡು ಮಗನ ಮೇಲೆಯೇ ಮನೆಯನ್ನೆಲ್ಲ ಒಪ್ಪಿಸಿ ಹೋಗುತ್ತಿದ್ದನು. ಮಗನ ಹೆಸರು ಬೋ ಬೋ. ಅಲ್ಲಿಯ ೨೦೦-೩೦೦ ಗುಡಿಸಲುಗಳಿಗೆ ಈ ಬೋ-ಬೋನೆ ರಕ್ಷಕ ಒಂದು ಸಲ ಹೀಗೆ ಎಲ್ಲರೂ ಹೊರಗೆ ಹೋದಾಗ ಒಮ್ಮೆಲೇ ಅಲ್ಲಿಯ ಗುಡಿಸಲುಗಳಿಗೆ ಉರಿ ಹತ್ತಿತು. ಬೋಬೋ ಎಷ್ಟೋ ಉಳಿಸಲು ಯತ್ನಿಸಿದನು. ಅದು ಸಾಧ್ಯವಾಗಲಿಲ್ಲ; ಕೊನೆಗೆ ನಿರುಪಾಯ ನಾಗಿ ಎಲ್ಲ ಉರಿ ಆರಿದ ಮೇಲೆ, ತಂದೆಯ ಹೆದರಿಕೆಗಾಗಿ ಉಳಿದಷ್ಟನ್ನಾದರೂ ಪಾರುಮಾಡಿಕೊಳ್ಳಲು ಯತ್ನಿಸಿದನು. ಬಿದಿರನ್ನು ರಕ್ಷಿಸಿದ್ದಾಯಿತು. ಗಡಿಗೆ ಮಡಿಕೆಗಳನ್ನುಳಿಸಿಕೊಂಡದ್ದಾಯಿತು. ಮಗ್ಗುಲಲ್ಲಿಯೇ ಸುಟ್ಟು ಬಿದ್ದಿರುವ ಹಂದಿಗೆ ಕೈಹಾಕಲಾಯಿತು.... ಆದರೆ ಗಡಿಬಿಡಿಯಲ್ಲಿ ಇಟ್ಟ ಬೊಟ್ಟೇ ಸುಡ ಹತ್ತಿತು. ಪಾಪ! ಬೋಬೋ ಮಂಗಾಣದವನಾಗಿ ಚುರುಕುಕೊಂಡ ಬೊಟ್ಟನ್ನು ಬಾಯಲ್ಲಿ ಇಟ್ಟುಕೊಂಡನು.... ಏನೋ ಒಂದು ತರಹದ ರುಚಿ!

ಏನೋ ಆನಂದ! ಏನೋ ಹೊಸದು! ಹೊಸ ಸಂವೇದನೆ! ಪುನಃ ಅದೇ ಬೊಟ್ಟನ್ನೇ ಆ ಹಂದಿಯ ಮೇಲಿಟ್ಟು ಪುನಃ ಬಾಯಿಗಿಳಿಸುವದಾಯಿತು. ಅದೇ ಆನಂದ! ಅದೇ ರುಚಿ! ಎಲ್ಲ ಬೊಟ್ಟುಗಳನ್ನೂ ಪರೀಕ್ಷಿಸಿದ್ದಾಯಿತು! ಅದೇ ರುಚಿ! ಬೊಟ್ಟು ಮುಷ್ಟಿಗೆ ಬಂದಿತು. ತಂದೆ ಬಂದಾಗ ಈ ಮಾತು ಹೇಳಲು ಅವನಿಗೂ ಅದೇ ಅನುಭವ. ನಿಜವಾದ ದಿವ್ಯತತ್ವ ಪಿತಾಪುತ್ರರಿಗೆ ಹೊಳೆಯಿತು. ೨೦೦–೩೦೦ ಗುಡಿಸಲುಗಳಲ್ಲಿದ್ದ ಹಂದಿಗಳು ಅಕಸ್ಮಾತ್ತಾಗಿ ಸುಡಲಾಗಿ, ಸುಟ್ಟಹಂದಿಗೆ ಇಂಥ ರುಚಿ ಬರುತ್ತದೆಂಬ ಸಿದ್ಧಾಂತ! ಅಂದಿನಿಂದ ಹಬ್ಬಹುಣ್ಣಿವೆ ಮಾಡಬೇಕಾದರೆ, ಸರಿ! ೨೦೦–೩೦೦ ಗುಡಿಸಲುಗಳು ಅಗ್ನಿ ನಾರಾಯಣನಿಗೆ ಆಹುತಿ........ ದಿವಸ ಕಳೆದುವು ಕೊನೆಗೆ ಪರಿಶ್ರಮ ಪಟ್ಟೂ ಪಟ್ಟೂ ೨೦೦–೩೦೦ ಗುಡಿಸಲ ಬೇಕಿಲ್ಲ ಒಂದಾದರೆ ಸಾಕು ಎಂಬ ಅನುಭವ ಬಂತು. ಕೊನೆಗೆ ಒಂದೂ ಬೇಡ; ಬರೀ ಹಂದಿ ಸುಟ್ಟರೆ ಸಾಕು; ಅದು ಹೆಚ್ಚು ರುಚಿಕರವಾಗುತ್ತದೆ ಎಂಬ ಸತ್ಯ ಹೊಳೆಯಿತು. ಅಂದಿನಿಂದ ತಾಜಾವಸ್ತುವಿನಕಿಂತ ಸುಟ್ಟ ವಸ್ತು ಹೆಚ್ಚು ರುಚಿಯಾಗುತ್ತದೆ ಎಂಬ ಮಾತನ್ನು ಜಗತ್ತು ಕಂಡಿತು. ಇದನ್ನು ಕಂಡುಹಿಡಿದ ಶ್ರೇಯಸ್ಸು ಹೋ-ಟಿ ಮತ್ತು ಬೋಬೋ ಪಿತಾಪುತ್ರರದು.

ಸತ್ಯವೇನೇ ಇರಲಿ ಬಿಡಲಿ! ಈ ಊಹೆಯ ಮಿಂಚೆಳೆಯನ್ನು ಹಿಡಿದು ಹೊರಟು, ಒಂದೊಂದಾಗಿ ಹೊಸ ಕಲ್ಪನೆಯ ಚಾತುರ್ಯವನ್ನು ತೋರುತ್ತಿರುವ ಲ್ಯಾಂಬ್ ಕವಿಯ ನಿಬಂಧನ ಚಾತುರ್ಯಕ್ಕೆ ಮೆಚ್ಚದವರಾರು?—

ಅಂದಾಕ್ಷಣಕ್ಕೆ ನಿಬಂಧ ಬರಿಯ ಊಹೆಯ ಚಮತ್ಕೃತಿಯಾಗಲೀ, ವಿನೋದದ ಸಾಹಸವಾಗಲೀ ಇರಬೇಕೆಂದು ಮಾತ್ರವಲ್ಲ. ಅನೇಕ ನಿಬಂಧನಕಾರರ ಸುಖದುಃಖಗಳನ್ನೂ, ಆಸೆ ಕನಲಿಕೆಗಳನ್ನೂ ಅವರ ನಿಬಂಧದಲ್ಲಿ ಕಾಣಬಹುದಾಗಿದೆ. "We learn in suffering what we teach in song" ಎನ್ನುವ ಕವಿಮಾತು ನಿಬಂಧನಕಾರನಿಗೂ ಅನ್ವಯಿಸುತ್ತದೆ. ಇದಕ್ಕೆ ಪುನಃ ಲ್ಯಾಂಬ್ ಕವಿಯ "ಕನಸಿನ ಮಕ್ಕಳೇ" (Dream Children) ಒಳ್ಳೇ ದೃಷ್ಟಾಂತ.

ಚಾರ್ಲ್ಸ್ ವಿಲ್ಲೆ ಅವರು ಹೇಳುವಂತೆ ಲ್ಯಾಂಬ್ ಕವಿಯ ಜೀವನವೆಂದರೆ ಒಂದು ಕಣ್ಣೀರ ಕಾರ್ಗಡಲು. ಅವನ ಸಹೋದ್ಯೋಗಿಗಳಾದ ಕೋಲ್‌ರಿಜ್ಜ

ಷೆಲಿ, ಬೈರನ್ ಮೊದಲಾದವರು "ಪಾಂಟಿಸೊಕ್ರಸಿ" "ಆದರ್ಶ ಸಮಾಜ ವ್ಯವಸ್ಥೆ"ಗಳ ಬಗ್ಗೆ ಗಂಭೀರ ವಿಚಾರ ಮಾಡುತ್ತಿರುವಾಗ ಲ್ಯಾಂಬ್‌ನ ದಿನಚರಿಯೆಂದರೆ ರೋಗಿಯಾದ ತಾಯಿಯ ಶುಶ್ರೂಷೆಮಾಡುವುದು, ವೃದ್ಧ ತಂದೆಯ ಮನರಂಜನೆಗಾಗಿ ಅವನ ಕೂಡ ಆಟವಾಡುತ್ತ ಕುಳಿತುಕೊಳ್ಳುವದು. ವಿಕ್ಷಿಪ್ತ ತಂದೆ, ರೋಗಿ ತಾಯಿ ಮತ್ತು ಹುಚ್ಚು ತಂಗಿಗಾಗಿ ಮೀಸಲಾದ ಲ್ಯಾಂಬನ ಜೀವನವು ಆಯುಷ್ಯದಲ್ಲಿ ಯಾವ ಸುಖವನ್ನೂ ಕಾಣಲಿಲ್ಲ. ಕಚೇರಿ ಬಿಟ್ಟು ಬರುವದೊಂದೇ ತಡ ಶುಶ್ರೂಷೆ, ಸೇವೆಗೆ ಪ್ರಾರಂಭ. ಅದರಲ್ಲಿ ೧೭೯೬ನೇ ಇಸ್ವಿಯಂತೂ ಲ್ಯಾಂಬನ ಜೀವನದಲ್ಲಿ ಕಾಳ ಅಮಾವಾಸ್ಯೆ. ಒಂದು ಸಲ ಅವನು ಹೊರಗೆ ಹೋದಾಗ, ಅವನ ತಂಗಿ ಮೇರಿ ಹುಚ್ಚಿನ ಆವೇಶದಲ್ಲಿ ರೇಗಿಗೆದ್ದು ಕೈಯಲ್ಲಿಯ ಚಾಕುವಿನಿಂದ ತಾಯಿಯನ್ನು ಇರಿದು ಬಿಟ್ಟಳು. ನಡುವೆ ಬಿಡಿಸಹೋದ ಆಳುಮಗಳನ್ನೂ ಹೊಡೆಯುತಕ್ಕವಳೇ; ಆದರೆ ಅಷ್ಟರಲ್ಲಿಯೇ ಲ್ಯಾಂಬ ಬಂದು ಅನಾಹುತವನ್ನು ತಪ್ಪಿಸಿದನು. ಈ ರಕ್ತಮಯ ಭಯಾನಕ ಸನ್ನಿವೇಶವನ್ನು ಕಂಡು ಲ್ಯಾಂಬನ ಕಣ್ಣು ಕತ್ತಲೆ ಗುಡಿಸಿತು. ಮುಂಗಾಣದವನಾದನು. ಕೊನೆಗೆ ಮೇರಿಯನ್ನು ಹುಚ್ಚರ ಆಸ್ಪತ್ರೆಗೆ ಹಾಕಿ ತಾನೂ ಅವಳ ಸೇವೆಗೆ ನಿಲ್ಲಬೇಕಾಯಿತು ಇಂದಿಗೆ ಪ್ರಾರಂಭ ಲ್ಯಾಂಬನ ದುರಂತ ಜೀವನದ ಕತೆ. ತಂಗಿಯ ಶುಶ್ರೂಷೆಗಾಗಿ, ಅವಳಿಗೆ ಮಾತ್ರ ತನ್ನ ಪ್ರೀತಿಯನ್ನು ಧಾರೆಯೆರೆಯಲು ಸಿದ್ಧನಾದನು. ಮದುವೆ ಆದಲ್ಲಿ ಹೆಂಡತಿಯ ಪ್ರೇಮವು ತಂಗಿಯ ಪ್ರೀತಿಗೆ ಆತಂಕ ತರುವದೆಂದು ಭಾವಿಸಿದನು. ಅಂದಿನಿಂದ ಜಗತ್ತಿನಲ್ಲಿ ಅವನಿಗೆ ಎರಡೇ ವಸ್ತುಗಳು. ಒಂದು ನಿರ್ಮಲಧರ್ಮ; ಎರಡನೆಯದ್ದು ತಂಗಿಯ ಪ್ರೀತಿ. ಅದಕ್ಕಾಗಿ ಆಮರಣ ಬ್ರಹ್ಮಚಾರಿಯಾಗಿರಲು ನಿಶ್ಚಯಿಸಿದನು. ಇಡೀ ಪ್ರಪಂಚದ ಸಾಹಿತ್ಯೇತಿಹಾಸದಲ್ಲೇ ಇಂಥ ಆದರ್ಶ ಅಣ್ಣತಂಗಿಯರ ಪ್ರೇಮ ಮತ್ತು ತ್ಯಾಗಗಳ ಸಾಹಸವನ್ನು ಕಾಣೆವು. ಮೇರಿ ನೆಟ್ಟಗಿದ್ದರೆ ಲ್ಯಾಂಬ ಎಲ್ಲಿ ಉನ್ಮಾದಿತನಾಗುವನೋ ಎಂದು ಭಯ; ಲ್ಯಾಂಬ ನೆಟ್ಟಗಿದ್ದಾಗ ಮೇರಿಯ ಬಗ್ಗೆ ಚಿಂತೆ. ಅನೇಕ ಸಲ ಇಬ್ಬರೂ ಸಂಜೆಯ ಮಬ್ಬುಗತ್ತಲೆಯಲ್ಲಿ ಇದಿರು ಬದಿರು ಕೂಡುವುದು; ಬರೀ ಒಬ್ಬರ ಮುಖವನ್ನು ಒಬ್ಬರು ನೋಡುವದು. ಇವಳು ನಕ್ಕರೆ ಅವನಿಗೆ ಆನಂದ; ಅವನು ನಕ್ಕರೆ ಇವಳಿಗೆ ಸಂತೋಷ. ಇಬ್ಬರೂ ಗಂಭೀರರಾದರೆ, ಇಬ್ಬರಿಗೂ ಕಣ್ಣೀರೇ ಮೊರೆ. ಅತ್ತು ಅತ್ತು

ಮನಸ್ಸು ಹಗುರಾಗಿ ಮಕ್ಕಳ ಮನಸ್ಸಿನಂತಾದರೆ ಪುನಃ ಆಹ್ಲಾದಕ್ಕೆ ಪ್ರಾರಂಭ.

ಆದರೆ, ಈ ಮೊದಲೇ ಇನ್ನೊಂದು ದುರ್ವಿಧಿ ಲ್ಯಾಂಬನಿಗೆ ಎರಗಿತ್ತು. ಚಿಕ್ಕಂದಿನಿಂದಲೂ ಲ್ಯಾಂಬ್ "Alice Winterton" ಎಂಬ ಹುಡುಗೆಯನ್ನು ಪ್ರೀತಿಸುತ್ತಿದ್ದ. ಅಖಂಡ ಏಳು ವರ್ಷ ಸುಖದುಃಖಗಳಲ್ಲಿ, ನೆಳಲು ಬೆಳಕುಗಳಲ್ಲಿ ಅವಳಿಗಾಗಿ ತಪಸ್ಸುಮಾಡಿದನು ಅನೇಕ ಸಲ ದೇವಿಯೂ ಒಲಿಯುವ ಲಕ್ಷಣ ಕಂಡಿತು. ಆದರೆ ವಿಧಿಯು ವಿಷಯವನ್ನು ಇಲ್ಲಿಗೇ ಬಿಡಲಿಲ್ಲ. ಲ್ಯಾಂಬ್ ಆ ಯಕ್ಷಿಣಿಯ ಪಾಣಿಗ್ರಹಣಕ್ಕಾಗಿ ಸೂಚಿಸಿದಾಗ ಯಾರೋ ಅವಳ ಕಿವಿಯಲ್ಲಿ ಉಸುರಿದರು: ಲ್ಯಾಂಬ ಮನೆತನದಲ್ಲಿರುವ ಹುಚ್ಚಿನ ಬಗ್ಗೆ ಜಾಗರೂಕವಾಗಿರಬೇಕೆಂದು. ಜಗತ್ತಿನ ರೀತಿಯನ್ನು ಬಲ್ಲ ಸುರಸುಂದರಿ ಲ್ಯಾಂಬನ ಕೈಬಿಟ್ಟಳು. ಲ್ಯಾಂಬನಿಗೆ ಅತೀವ ದುಃಖವಾಯಿತು. ಅವಳ ಸಲುವಾಗಿ ಪರಿತಪಿಸಿದನು; ಕಂಗೆಟ್ಟನು ಏನಾದರೂ ಷೆಲಿ ಹೇಳುವ ಕವಿವಾಕ್ಯ ಸತ್ಯವಾಯಿತು:

We pursue a maiden and clasp a reed; Gods and men we are all deluded thus. ಲ್ಯಾಂಬ ಹಿಮ್ಮರಳಿದನು. Alice ಳು ಬರ್‌ಟ್ರ್ಯಾಮ್ ಎಂಬ ಪುಸ್ತಕ ವ್ಯಾಪಾರಿಯ ಕೈಹಿಡಿದು "ಧನ್ಯ"ಳಾದಳು........ ಏನಾದರೂ ಲ್ಯಾಂಬನ ಮನಸ್ಸಿನಲ್ಲಿಯ ಚಿತ್ರ ಮಾತ್ರ ಮಾಸಲಿಲ್ಲ

ಎಷ್ಟೋ ವರ್ಷಗಳವರೆಗೆ, ತನ್ನ ಮರಣದ ಪರ್ಯಂತವೂ ಕೂಡ ಲ್ಯಾಂಬ Aliceಳ ಮನೆಯ ಸುತ್ತು ಸಂಜೆ ವೇಳೆ ತಿರುಗುತ್ತಿದ್ದನೆಂದು ಹ್ಯಾಜ್ಲಿಟ್ ಹೇಳುತ್ತಾನೆ. ಮೇರಿ ಚಿರಂತನ ಯೋಗಿಣಿ; ಲ್ಯಾಂಬ ಚಿರಂತನ ಬ್ರಹ್ಮಚಾರಿ. ಈ ಜೊತೆ ಜೀವನದಲ್ಲಿ ಹಾಗೇ ಸಾಗಿದುವು. ಎಲಿಸ್‌ಳ ವಿಷಯ ಬಂದಾಗಲೆಲ್ಲ ಲ್ಯಾಂಬ್ ಕಣ್ಣೀರು ಸುರಿಸದೆ ಇಲ್ಲ. "ಹಳೆಯ ಪಳಕೆಯ ಮುಖಗಳಲ್ಲಿ" ಅವಳಿಗಾಗಿ ಪ್ರಲಪಿಸಿದ್ದಾನೆ:

" I loved a love once, fairest among women;
Closed are her doors; I must not see her;
All all are gone; the old familiar faces"

ಲ್ಯಾಂಬ್ ಎಲಿಸ್‌ಳನ್ನು ಮದುವೆಯಾಗಿದ್ದರೆ?........ ಮದುವೆಯಾಗಿದ್ದರೆ?........ ರೇಘು ರಾಜ್ಯ. ಆದರೂ ಆಗಿದ್ದರೆ?........ ಆ ಕನಸೇ "ಕನಸಿನ ಮಕ್ಕಳು" ನಿಬಂಧದ ವಸ್ತು

"ಕನಸಿನ ಮಕ್ಕಳು" ಒಂದು ಸುಂದರಭಾವಗೀತೆ ಆದರ್ಶ ನಿಬಂಧ. ಕವಿ ಲ್ಯಾಂಬ್ ತನ್ನ ಆರಾಮು ಖುರ್ಚಿಯಲ್ಲಿ ಒರಗಿರುತ್ತಾನೆ. ಹಾಗೆ ವಿಚಾರ ಮಾಡುತ್ತ ಮಾಡುತ್ತ ಕಣ್ಣು ಅರೆಮುಚ್ಚಿದಂತಾಗುತ್ತವೆ. ನೋಡ ನೋಡುತ್ತಿರುವದರಲ್ಲಿ ಏನೋ ಒಂದು ಚಿತ್ರ; ಏನೋ ಬಣ್ಣ ಬೆಳಕು; ಹಾಗೇ ಧೇನಿಸುತ್ತಿರುವಾಗ ಎರಡು ಚಿಕ್ಕ ಮಗುಗಳು ಎದುರಿಗೆ ಬರುತ್ತವೆ. ಒಂದು ಹೆಣ್ಣು, ಒಂದು ಗಂಡು; ಮುದ್ದಾದ ಶಿಶುಗಳು. ಹಾಗೇ ನುಸುಳುತ್ತ ಲ್ಯಾಂಬನ ಕಾಲಹತ್ತಿರ ಹಾಯುತ್ತವೆ, ಅವನ ಕೈ ತಟ್ಟುತ್ತವೆ, ಮೈ ಮುಟ್ಟುತ್ತವೆ. ತಂದೆಯ ಮೇಲಿರುವ ವಾತ್ಸಲ್ಯದಿಂದ ಅವನಿಗೆ ಹತ್ತಾರು ಪ್ರಶ್ನೆಗಳನ್ನು ಕೇಳುತ್ತವೆ. ಲ್ಯಾಂಬ ಚಿಕ್ಕವನಿರುವಾಗ ಹೇಗಿದ್ದ? ಅವನ ಅಣ್ಣ ಹೇಗಿದ್ದ? ಅವನು ಓದುತ್ತಿರುವ ಪುಸ್ತಕವಾವುದು? ಅವನು ಉಣ್ಣುವ ರೀತಿ; ಆಡಿದ ಆಟ, ನೂರಾರು ಮಾತು, ನಮ್ಮ ಮಕ್ಕಳೆಲ್ಲ ನಮಗೆ ಕೇಳುವ ವಿಷಯ ಲ್ಯಾಂಬ್ ಕೂಡ ಮಕ್ಕಳ ಮೇಲಿನ ಪ್ರೀತಿಯಿಂದ ಎಲ್ಲ ಮಾತುಗಳಿಗೂ ಬೇಸರದೆ ಉತ್ತರ ಹೇಳುತ್ತಾನೆ ಹೆಣ್ಣು ಮಗುವಂತೂ ತುಂಬಾ ಮುದ್ದಾದದ್ದು; ಅವಳ ಪ್ರಶ್ನೆಗೆ ಉತ್ತರ ಹೇಳುತ್ತ ಹೇಳುತ್ತ ಅಂತಃಕರಣ ತುಂಬಿ ಅವಳನ್ನು ಮುದ್ದಿಡಹೋಗುತ್ತಾನೆ. ಓ! ಅವಳ ಆ ಸುಂದರ ಕಪ್ಪು ಕಣ್ಣುಗಳು!! ಮಗುವಿನ ತಾಯಿ ಎಲಿಸ್‌ಳೇ ನೆನಪಾಗುತ್ತಾಳೆ. ಇನ್ನೇನು ಹರ್ಷವುಕ್ಕಿ ಮುದ್ದಿಡುವವ........ ಮಗು ಮೆಲ್ಲನೆ ಕೈಮರೆಸಿ ಜಾರುತ್ತದೆ ಎರಡೂ ಶಿಶುಗಳು ದೂರ ದೂರ ದಿಗಂತದಲ್ಲಿ ಲೀನವಾಗುವಂತೆ ತೇಲುತ್ತವೆ. ಲ್ಯಾಂಬ್ ಹಿಡಿಯ ಹೋಗುತ್ತಾನೆ, ಮಗುಗಳನ್ನು ಅಲ್ಪರಿದು ಕಿರುಚುತ್ತಾನೆ. ದೂರದಿಂದಲೇ ಕೈಮಾಡಿ ಮಗುಗಳು ಸಾರುತ್ತವೆ, "ನಾವು ನಿನ್ನ ಮಕ್ಕಳಲ್ಲ; ಎಲಿಸ್‌ಳ ಮಕ್ಕಳೂ ಅಲ್ಲ, ನಾವು ಶಿಶುಗಳು ಕೂಡ ಅಲ್ಲ, ಎಲಿಸ್‌ಳ ಮಕ್ಕಳು ಬರ್‌ಟ್ರಮ್‌ನನ್ನು ತಂದೆ ಎಂದು ಸಂಬೋಧಿಸುತ್ತಾರೆ. ನಾವು ಏನೂ ಅಲ್ಲ. ಬರಿಯ ಶೂನ್ಯ ನೀನು ಎಲಿಸಳನ್ನುಪಡೆದು ನಮ್ಮ ಜನನ ವಾಗಬೇಕಾದರೆ ನಾವು ಬೇಸರಿಯದೆ ವಿಯತ್ಪಥದಲ್ಲಿ ದಾರಿಕಾಯುತ್ತ ಕೂಡ ಬೇಕಾಗಿದೆ" ಎಂದು. ಕೈಯಲ್ಲಿಯ ಹಕ್ಕಿ ಹಾರುತ್ತವೆ. ಲ್ಯಾಂಬ್ ಕಣ್ಣು ತೆರೆಯುತ್ತಾನೆ, ಸುತ್ತಲೇನೂ ಇಲ್ಲ. ತಾನು; ತನ್ನ "ಬ್ರಹ್ಮಚಾರಿ ಖುರ್ಚಿ;" ಮತ್ತು ಮಗ್ಗುಲಿಗೆ ಪ್ರೀತಿಯ ತಂಗಿ ಮೇರಿ. ಆ ಶಿಶುಗಳು? ಲ್ಯಾಂಬ್ ಎಲಿಸ್‌ಳನ್ನು ಮದುವೆಯಾಗಿದ್ದರೆ ಮಾತ್ರ! ಎಷ್ಟು ಜನ್ಮಚಕ್ರ ಉರುಳ

ಬೇಕೋ ಏನೋ!.... ಹಣಕ್ಕಾಗಿ ಒಬ್ಬ ಪುಸ್ತಕಮಾರುವವನನ್ನು ಮದುವೆಯಾಗಿ ಎಲಿಸ್ ಬಾಳಿ ಸತ್ತಳು, ಅವಳ ಸಲುವಾಗಿ ಪರಿತಪಿಸಿ ಕನಸಿನ ಮಕ್ಕಳನ್ನು ಕಂಡ ಲ್ಯಾಂಬ್ ಸತ್ತೂ ಬದುಕಿದ್ದಾನೆ. ಇಂದು ಎಲಿಸ್‌ಳ ಹೆಸರು ಇಂಗ್ಲಿಷ ಸಾಹಿತ್ಯದಲ್ಲಿ ಲಕ್ಷಕ್ಕೆ ಬರುವುದು ಪುಸ್ತಕ-ವ್ಯಾಪಾರಿ ಬರ್-ಟ್ರಮ್‌ನಿಂದ ಅಲ್ಲ; ಅವಳಿಗಾಗಿ ಹಲುಬಿ ಹಾತೊರೆದ ಲ್ಯಾಂಬನಿಂದ. ಅವನಿಂದ ಆ ವ್ಯಕ್ತಿಕೆ ಜೀವಕಳೆ ಪಡೆದಿದೆ. Gods and men we are all deluded thus! .. ...

"We are neither of Alice nor of thee; nor are we children at all. Children of Alice call Bertram father. We are nothing; less than nothing"—

ಇದೂ ಒಂದು ನಿಬಂಧ. ನಾನು ಆಗಲೇ ಹೇಳಿದೆನಲ್ಲ, ನಿಬಂಧಕ್ಕೆ ಬರಿಯ ಊಹೆ, ವಿನೋದ, ಅನುಭಾವ ಮಾತ್ರ ಬೇಕೆಂದಲ್ಲ, ಅದು ಕವಿಯ ಜೀವನದ ಕೂಗೂ ಆಗಬಹುದು. ಆ ರೀತಿ "ಕನಸಿನ ಮಕ್ಕಳು" ಒಂದು ಆದರ್ಶ ನಿಬಂಧವಾಗಿದೆ, ಗದ್ಯ ಭಾವಗೀತವಾಗಿದೆ, ಪ್ರತಪ್ತ ಹೃದಯದ ಕೂಗಾಗಿದೆ.

ಹೀಗಾಗಿ ನಿಬಂಧಕಾರನಿಗೆ ವಸ್ತು ಮುಖ್ಯವಲ್ಲ; ನಿರ್ವಹಣ. ಸಂಗತಿ ಮಹತ್ವವಲ್ಲ; ವ್ಯಕ್ತಿತ್ವ ಲ್ಯಾಂಬನನ್ನು ಆದರಿಸದವರಾರು? ಅವನ ನಿಬಂಧಗಳೆಲ್ಲ ಇಂಥ ಸುಂದರ ಮಾತುಗಳೇ ಆಗಿವೆ. ಅಂತಲೇ ತನ್ನ ನಿಬಂಧಗಳ ಬಗ್ಗೆ ಅವನು ಹೇಳುತ್ತಾನೆ:-

The essays want no preface: they are all preface. The preface is nothing but a talk with the reader; and they do nothing else

ಕನ್ನಡದಲ್ಲಿಯೂ ಕೂಡ ಈ ಪರಂಪರೆ ಎಷ್ಟೋ ಬೆಳೆದು ಬಂದಿದೆ. ಬೇಂದ್ರೆ ರಂಗಣ್ಣ ಅವರ ವಿಮರ್ಶಾತ್ಮಕ ಪ್ರಬಂಧಗಳು, ಆನಂದರ ಅನುಭಾವ, ಕಾರಂತರ "ದಸ್ತು ಬೀನದ" ಊಹೆ, ವಿನೋದ; ಹರಟೆಮಲ್ಲರ ವ್ಯಕ್ತಿಚಿತ್ರಗಳು,ಎನ್ಕೆ ಅವರ ಕಲ್ಪನಾಚಾತುರ್ಯ,ನಿರ್ಜೀವ ಊರುಗಳಿಗೂ ಜೀವಕಳೆ ಕೊಡುವ ಗೋಕಾಕರ "ಇಂದಿನ ಕರ್ನಾಟಕದ" ರೇಖಾ ಚಿತ್ರಗಳು ಇವೆಲ್ಲ ಇಂದಿನ ಕನ್ನಡ ನಿಬಂಧಪ್ರಪಂಚದ ವಿಸ್ತಾರ ಮತ್ತು ವೈವಿಧ್ಯಗಳನ್ನು ತೋರಿಸುತ್ತವೆ. ಆದರೆ ಅನೇಕ ಪ್ರಬಂಧಗಳಲ್ಲಿ ಇಂಗ್ಲಿಷ್ essay

ನಿಬಂಧವನ್ನು ಕನ್ನಡ "ಹರಟೆಗೆ" ಮಾತ್ರ ತಿರುಗಿಸಿಕೊಂಡು ಹೆಚ್ಚಾಗಿ ವಿನೋದಕ್ಕೆ ಲಕ್ಷ್ಯ ಪೂರೈಸಿದ್ದು ಕಂಡುಬರುತ್ತದೆ. ನಾವು ನಿಬಂಧದ ಇತರ ಭಾವಗಳನ್ನೂ ಗ್ರಹಿಸಿ, ಉಳಿದ ಸಾಹಿತ್ಯರೂಪಗಳ ಸರಿಸಮಾನ ಸ್ಥಿತಿಗೆ ನಿಲ್ಲಿಸುವಂತಾಗಬೇಕು. "ಹರಟೆ" ಈ ವರೆಗೆ ಪಡೆದ ಮರ್ಯಾದೆಗಿಂತ ಇದಕ್ಕೂ ಹೆಚ್ಚಿನ ಉಜ್ವಲ ಭವಿತವ್ಯನನ್ನು ಕಾಣಬೇಕು.

ಮಹನೀಯರೆ, ನಾನು ಈ ವರೆಗೆ ಆಡಿದ ಮಾತುಗಳಲ್ಲಿ ಏನಾದರೂ ತಥ್ಯಕಂಡಿದ್ದರೆ ಇದೊಂದು ಹರಟೆಯ ಬಗ್ಗೆ ಭಾಷಣವೆಂದು ಗ್ರಹಿಸಬೇಕು. ಹಾಗಿಲ್ಲದೆ ನಾಲ್ಕು ಸೂತ್ರಗಳಿಗೆ ಹೇಳಿದ ನಾಲ್ಕು ಲಕ್ಷಣಗಳು ಮಾತ್ರ ರುಚಿಸಿದರೆ "ಹರಟೆಯ"ಯ ಬಗ್ಗೆ ಓಂದು ಹರಟೆ ಎಂದು ಗ್ರಹಿಸಬೇಕು. ಏನಾ-ದರೂ ವೇಳೆ ಬೇಸರಬಾರದೆ ಆರಾಮಾಗಿ ಹೋಗಿದ್ದರೆ ನಾನು ಈ ವರೆಗೆ ಆಡಿದ ಮಾತಿನ ಸಾರ್ಥಕ್ಯ. ಅದುವೇ ಒಳ್ಳೇ ಹರಟೆಯ ರೀತಿ!

———

# ಜನ್ನನ ಯಶೋಧರ ಚರಿತೆ

ಹದಿಮೂರನೆಯ ಶತಮಾನದ ಮಹತ್ವದ ಕವಿಗಳಲ್ಲಿ ಜನ್ನನು ತೀರ ಶ್ರೇಷ್ಠನು. ಆದಿಪಂಪನಿಂದ ಪ್ರಾರಂಭವಾದ ಧರ್ಮ ಮತ್ತು ಕಾವ್ಯಧರ್ಮಗಳ ಪರಂಪರೆಯನ್ನು ಅನೂನವಾಗಿ ಸಾಗಿಸಿಕೊಂಡು ಬಂದು, ಅವನಂತೆಯೇ ತನ್ನ ಧಾರ್ಮಿಕ ಕಾವ್ಯದಕಿಂತ "ಲೌಕಿಕ" ಕಾವ್ಯಕ್ಕಾಗಿಯೇ ಹೆಚ್ಚಾಗಿ ಮನ್ನಣೆಪಡೆದವನು. ಇವನ ಆದರ್ಶವನ್ನೇ ಇಟ್ಟುಕೊಂಡು ಕವಿವೃಂದವೇನೂ ಕಡಿಮೆಯಿಲ್ಲ. ಆಂಡಯ್ಯ, ಕಮಲಭವ, ಮಲ್ಲಿಕಾರ್ಜುನ, ಕುಮುದೇಂದು ಮೊದಲಾದ ಹೆಚ್ಚು ಕಡಿಮೆ ಅವನ ಸಮಕಾಲೀನರೂ, ಮಂಗರಸ, ನಂಜುಂಡ, ಬಾಹುಬಲಿ ಮೊದಲಾದ ಈಚಿನ ಕವಿಗಳೂ ಅವನನ್ನು ನೆನೆಯದೆ ಹೋಗಿಲ್ಲ. ನಂಜುಂಡ ಕವಿಯು ಜನ್ನನು "ಬಲ್ಲಿದ ಕರ್ನಾಟಕ ಕವಿಗಳೆಲ್ಲರ ಗೆದ್ದಿದ್ದಾನೆ" ಎಂದು ಹೇಳಿದರೆ, ಮಧುರನಂತೂ ಜನ್ನನನ್ನು ಹೆಚ್ಚು ಕಡಿಮೆ ಗುರುಸ್ಥಾನದಲ್ಲಿರಿಸಿಕೊಂಡಿದ್ದಾನೆ

"ತನ್ನ ತಱುವಾಯೆ ಕೃತಿವೇಳ್ವನ್ನಂ ನೀನಲ್ಲದೆ ಇಲ್ಲವೆಂದು ಅತಿ ಮುದದಿಂ ಮನ್ನಿಸಿ ಸಲುಹುಗೆ ಸತ್ಕವಿಜನ್ನಂ" ಎಂದು ಅವನ ಪ್ರಾರ್ಥನೆ. ಅಷ್ಟೇ ಅಲ್ಲದೆ, ಅವನ ಅಭಿಪ್ರಾಯದ ಪ್ರಕಾರ "ಶಾಸ್ತ್ರ ಲೌಕಿಕ ಕಲೆಗಳಲ್ಲಿ" ನೇಮಿ ಮತ್ತು ಜನ್ನರಿಬ್ಬರೇ ಸೀಮಾಪುರುಷರೆಂದು ಅವನ ಮತ

"ಸರ್ವರ ಸಮ್ಮತಮೆನಗಿದು; ಗರ್ವದ ಮಾತಲ್ಲ; **ಶಾಸ್ತ್ರಲೌಕಿಕ ಕಲೆಯೊಳ್ ಬೇರ್ವರಿದ ನೇಮಿಜನ್ನಮರಿರ್ವರೆ ಕರ್ನಾಟಕೃತಿಗೆ ಸೀಮಾಪುರುಷರ್"**

ಹಾಗಾದರೆ ಈ ಮಾತಿನ ಅರ್ಥವೇನು? ಜನ್ನ ಕವಿಯು ಯಾವ "ಶಾಸ್ತ್ರ ಲೌಕಿಕ ಕಲೆಗಳಲ್ಲಿ" "ಸೀಮಾಪುರುಷನಾಗಿದ್ದಾನೆ"? ಈ "ಶಾಸ್ತ್ರ ಮತ್ತು ಲೌಕಿಕಕಲೆಗಳ"ನ್ನು ಅಳವಡಿಸಿಕೊಂಡ ಅವನ ಕೃತಿರತ್ನವಾದ ಯಶೋಧರಚರಿತೆಯ ವೈಶಿಷ್ಟ್ಯಗಳೇನು? ಪಾತ್ರವಿವರಣೆಯೆಂತು? "ಶಾಸ್ತ್ರ" ಧರ್ಮದೃಷ್ಟಿ ಹೇಗೆ? "ಲೌಕಿಕ"-ಶೈಲಿ ಏನು—ಎನ್ನುವ ಮಾತುಗಳನ್ನು ವಿಚಾರಮಾಡುವಾ :—

**ಜನ್ನನ ಧರ್ಮದೃಷ್ಟಿ ಇಲ್ಲವೆ ಯಶೋಧರ ಚರಿತೆಯಲ್ಲಿಯ ಜೈನ ವಾತಾವರಣ:**

'ಪರಮಶ್ರೀಜಿನ ಪಾದಪಲ್ಲವ ನಿತಾಂತಂ; ನಿರ್ಮಳ ಜೈನಮಂದಿರ
ನಿರ್ಮಾಣಧನಂ'

'ಮಾನವ ಮೇರು'ವಾದ ಜನ್ನನು ಕಾವ್ಯವನ್ನು ಬರೆ ಬರೆಯುತ್ತ ಅದು ಎಷ್ಟೋಮಟ್ಟಿಗೆ 'ಲೌಕಿಕ'ವಾಗಿ, ಪ್ರಣಯ ಕಥೆಯಾಗಿ, ಪರಿಣಮಿಸಿದ್ದರೂ, ಅವನ ಮೂಲ ಉದ್ದೇಶವು ಧಾರ್ಮಿಕವಾದದ್ದು. ಆ ದೃಷ್ಟಿಯನ್ನಿಟ್ಟುಕೊಂಡೇ ಅವನು ಈ ಕಾವ್ಯವನ್ನು ಬರೆದಿದ್ದಾನೆ. ಯಾಕಂದರೆ, ಸ್ವತಃ ಜನ್ನನು 'ಗಂಡರಾದಿತ್ಯನ' ಪಟ್ಟಣದಲ್ಲಿ ಹೊಸ ಚೈತ್ಯವನ್ನು ಕಟ್ಟಿಸಿದನು. ದೋರಸಮುದ್ರದಲ್ಲಿ ಶಾಂತಿ ಜಿನಾಲಯವನ್ನು ಮಾಡಿಸಿದನು. ಮತ್ತು ಈ ಕಾವ್ಯವನ್ನು ಬರೆದ ೧೦–೧೨ ವರುಷಗಳಲ್ಲಿಯೇ ಬರೆಯಲ್ಪಟ್ಟ ಅನಂತನಾಥ ಪುರಾಣದಲ್ಲಿ ಕವಿಯು ತನ್ನ ಕಾವ್ಯೋದ್ದೇಶವನ್ನು ಸ್ಪಷ್ಟವಾಗಿ ಹೇಳಿದ್ದಾನೆ : "ಅರಿದಿದು ಬಾಳಬಟ್ಟೆ ಪರಮಾಗಮಮಲ್ಲದೆ, ಜಾರ ಚೋರ ವೀರರ ಕಥೆಯಂತೆ, ಬಾಯ್ಸವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ." ಅವನ ಕಾವ್ಯವು ಅರುಹನ ನಿರಾಭರಣ ಮೂರ್ತಿಯಂತೆ. "ದೇವಾಧೀಶನನೊರ್ಮೆ ವರ್ಣಿಸೆ, ಮನೋವಾಕ್ಕಾಯ ಸಂಶುದ್ಧಿಯಿಂ ದೇವೇಂದ್ರತ್ವಮೆ ಸಾರ್ವುದು" ಇದು ಅವನ ನಂಬುಗೆ. ಆದ್ದರಿಂದ ಯಶೋಧರ ಚರಿತೆಯಲ್ಲಿ ಬರುವ ಕಾವ್ಯೋದ್ದೇಶ; ಅಭಯ ರುಚಿ ಮತ್ತು ಅಭಯಮತಿಗಳ ಸಂವಾದದಲ್ಲಿ ಬರುವ ಜನ್ಮಾಂತರ ಮತ್ತು ದೇಹಮರಣಗಳ ವಿಚಾರ; ಚಂಡಕರ್ಮ ಮತ್ತು ಅಕಂಪನ ಮಹರ್ಷಿಗಳ ಸಂವಾದದಲ್ಲಿ ಬರುವ ಆತ್ಮಸ್ವರೂಪ ವಿವರಣೆ, ಕೇವಲ ಆಸ್ರವಕ್ಕಾಗಿ ಯಶೋಧರ ಚಂದ್ರಮತಿಯರು ನಾನಾ ಯೋನಿಗಳಲ್ಲಿ ಬರಬೇಕಾಯಿತೆಂಬ ಜನ್ಮಾಂತರದ ಕತೆ; ಮತ್ತು ಕೊನೆಯವಾಗಿ ಜನ್ನನು ಆಗಾಗ ಉಪಯೋಗಿಸುತ್ತಿರುವ ಜೈನಧರ್ಮದ ಪಾರಿಭಾಷಿಕ ಪದಗಳಲ್ಲಿ ಈ ಕಾವ್ಯದ ಜೈನವಾತಾವರಣವನ್ನು ಕಾಣಬಹುದಾಗಿದೆ.

ಜನ್ನನ ಕಾವ್ಯೋದ್ದೇಶವೆಂದರೆ :—

ಶ್ರಾವಕ ಜನದುಪವಾಸಂ
ಜೀವದಯಾಷ್ಟಮಿಯೊಳ್ ಆಗೆ ಪಾರಣೆ ಕಿವಿಗ–
ಳ್ಗೀ ವಸ್ತುಕಥನದಿಂದುದ್–
ಭಾವಿಸೆ ಕವಿಭಾಳಲೋಚನಂ ವಿರಚಿಸಿದಂ ||

ಅಷ್ಟೇ ಅಲ್ಲದೆ, ಅವನ ಪ್ರಕಾರ ಈ ಕಾವ್ಯವನ್ನು ಕೇಳಿದವರಿಗೆ ದೊರೆಕುವ ಲಾಭವೆಂದರೆ :—

ಪರೆವುದು ದುರಿತ ತಮಸ್ತ್ರಂ
ಪೊರೆಯೇಱುವುದಮಳದೃಷ್ಟಿ ಕುವಳಯವನಮ್ ।
ಆಚರಿಪ ಜನಕ್ಕೆ ಯಶೋಧರ ಚರಿತ ಕಥಾಶ್ರವಣಮೆಂಬ
ಚಂದ್ರೋದಯದೊಳ್ ॥

ಆದ್ದರಿಂದ ಅವನು ಹೇಳಲು ಹೊರಟಿರುವ ಕಥೆಯೆಂದರೆ ಯಶೋಧರ ಅಮೃತಮತಿಯರ ಪ್ರಣಯ ಕಥೆಯನ್ನಲ್ಲ, ಅಭಯರುಚಿ ಕುಮಾರಂ ಮಾರಿದತ್ತಂಗೆ ಹಿಂಸಾರಭಸಮತಿಗೆ ಸಯ್ಪಂ ಪೇಳ್ದು ಧರ್ಮಕ್ಕೆ ತಂದೀಶುಭಕಥನಮಂ ಕೇಳ್ವ ಭವ್ಯಪ್ರಭು ಸಭೆಗೆ ಎಸೆದಿರ್ಕುಂ ಮಂಗಳಂ ಶ್ರೀವಿಲಾಸಂ ।

ಅಷ್ಟೇ ಅಲ್ಲದೆ, 'ಪರಮ ಜಿನೇಂದ್ರ ಶಾಸನ ವಸಂತದೊಳ್ ಈ ಕೋಕಿಲಸ್ವನಂ ಪರೆಗೆ' ಎಂದು ಅವನ ಅಭಿಲಾಷೆ. ಹೀಗಾಗಿ ಇಲ್ಲಿ ಬರುವ ಕಾವ್ಯೋದ್ದೇಶವು ಸುನಿಶ್ಚಿತವಾಗಿ ಧಾರ್ಮಿಕ.

ಅದರಂತೆಯೇ, ಸಮಯ ಸಿಕ್ಕಾಗಲೆಲ್ಲ ಕವಿಯು ಜೈನ ತಾತ್ವಿಕ ವಿಚಾರಗಳನ್ನೂ ಹೇಳದೆ ಹೋಗಿಲ್ಲ. ಅಭಯರುಚಿಯ ಪ್ರಕಾರ ನಿಜವಾದ ಜಿನನಿಗೆ ಮರಣದ ಭಯವಿಲ್ಲ. ಆಧಿ ವ್ಯಾಧಿಗಳಿಲ್ಲ ಅವನು ನಿಸ್ಸಂಗಿ, ನಿಸ್ಪೃಹಿ ಹೃದಯದ ಹೆದರಿಕೆಯಂತೂ ಅವನಿಗೆ ಮೊದಲಿಗೇ ಇಲ್ಲ. ಜೀವನಾಗಿರುವವನು ತನ್ನ ಮಾರ್ಗದಲ್ಲಿ ಬರುವ ಪರೀಷಹಗಳನ್ನು ದಾಟಿ, ಮೆಟ್ಟಿನಿಲ್ಲಬೇಕು. ಈ 'ಪೆತ್ತ ಪರೀಷಹಜಯಮೆ ತಪಂ'. ನಿಯತಿಯಿಂದ ರಚಿತವಾದ ಜೀವನದ ದಂದುಗಳು ಅನಿವಾರ್ಯ. ಇದನ್ನು ಜನ್ನನ ಬಾಯಿಂದಲೇ ಕೇಳಬೇಕು.

ನಿಯತಿಯನಾರ್ ಮೀರಿದಪರ್ ? ಭಯಮ್ ಏವುದೊ ? ಮುಟ್ಟಿದೆಡೆಗೆ ಸೈರಿಸುವುದೆ ಕೇಳ್, ನಯವಿದೆ, ಪೆತ್ತ ಪರೀಷಹ ಜಯಮೆ ತಪಂ; ತಪಕ್ಕೆ ಬೇಱೆ ಕೋಡೆರಡೊಳವೇ ?

ಹೀಗಾಗಿ, ಈ ಪರೀಷಹಗಳನ್ನು ಗೆದೆಯುವುದೇ ತಪಸ್ಸು. ಅದಕ್ಕಾಗಿ ಬೇರೆ ಅಡವಿಗೆ ಹೋಗಿ ತಪಸ್ಸನ್ನು ಮಾಡಬೇಕೆಂಬ ನಿರ್ಬಂಧವೇನೂ ಇಲ್ಲ. ಪ್ರತಿ ಜೀವವೂ ತಾನು ಮಾಡಿದ್ದನ್ನು ಉಣ್ಣಲೇಬೇಕು.— ಮಾಡಿದುದಂ ನಾವುಣ್ಣದೆ ಪೋಕುಮೆ? ಭಯಮೇಕಣ್ಣ, ಭವಪ್ರಕೃತಿ ವಿಕೃತಿ ನಾವಱ—

ಯದುದೇ?— ಆದ್ದರಿಂದ ಜೀವನದಲ್ಲಿ ಕೇವಲ ಸುಖವನ್ನು ಅರಸುವದೆಂದರೆ ಮರುಮರೀಚಿಕೆಯಂತೆ; ಶಶವಿಷಾಣದಂತೆ ದುಸ್ಸಾಧ್ಯ.

ಎನಿತೊಳವು ಅಪಾಯ ಕೋಟಿಗಳ್
ಅನಿತರ್ಕಂ ಗೇಹಮಲ್ತೆ ದೇಹವಿದಂ ನೆ-
ಟ್ಟನೆ ಪೊತ್ತು ಸುಖಮಂ ಅಱಸುವ
ಮನುಜಂ ಮೊರಡಿಯೊಳೆ ಮಾದುಪವಿಮಱ ಅಸದಿರಂ||

ಆದ್ದರಿಂದ ಇಂಥ ದೇಹದ ಮರಣವೆಂದರೆ ಮುಂದಿನ ಉನ್ನತಿಯ ದಾರಿ. ಅದಕ್ಕಾಗಿ ವೃಥಾ ಹೆದರಬೇಕಿಲ್ಲ. ಮೂಡುವ ಮುಳುಗುವ ದಂದುಗವೆಂದರೆ ಜೀವನಿಗೆ "ಆಡಿದ ಪೊಲಂ; ಉಂಡ ಅಮರ್ದು; ಕಂಡ ವಿಚಾರಂ"

ಇದರಂತೆಯೇ, ಅಕಂಪನ ಮಹರ್ಷಿಗಳು ಚಂಡಕರ್ಮನಿಗೆ ಉಪದೇಶಿಸಿದ ಬೋಧಾಮೃತದಲ್ಲಿ ಜೈನ ಧರ್ಮದ ಪ್ರಕಾರ ಆತ್ಮಪರಮಾತ್ಮಗಳ ವಿವರಣೆಯನ್ನೇ ಕಾಣುತ್ತೇವೆ.

ಜನ್ನನ ಪ್ರಕಾರ ಚೈತನ್ಯಸ್ವರೂಪನಾದ ಆತ್ಮನು ಪೃಥ್ವಿ, ವಾಯು, ಅಪ್ಪು, ತೇಜಸ್ಸು ಮೊದಲಾದ ಭೂತಚತುಷ್ಟಾವಯವದಿಂದ ಕೂಡಿದ ದೇಹವನ್ನು ತುಂಬಾ ವ್ಯಾಪಿಸಿದ್ದಾನೆ. ಯಾವ ರೀತಿ ಕೇವಲ ಕಡಿಯುವದರಿಂದಾಗಲೀ, ಇಲ್ಲವೇ ಸೀಳುವದರಿಂದಾಗಲೀ, ಕಟ್ಟಿಗೆಯಿಂದ ಅಗ್ನಿಯು ಹೊರಬೀಳದೆ, ಘರ್ಷಣದಿಂದೆ ಮಾತ್ರ ಹೊರಬೀಳುತ್ತದೆಯೋ, ಹಾಗೆಯೇ ಇಡೀ ದೇಹವನ್ನು ವ್ಯಾಪಿಸಿದ ಜೀವನು ದೇಹದಿಂದ ವಿಭಿನ್ನವಾಗಿ ಕಾಣಿಸುವುದು ವಿವೇಕಕ್ರಿಯೆಯಿಂದ ಮಾತ್ರ. ಕಲ್ಲಲ್ಲಿ ಹೊನ್ನು, ಹಾಲಿನಲ್ಲಿ ಘೃತವಿದ್ದ ಹಾಗೆ, ವಸ್ತುಭೇದಿಪಂಗೆ ಆತ್ಮಂ ಒಳಂ. "ಮಾಡುವನಾತ್ಮಂ, ನೆಟ್ಟಗೆ ಮಾಡಿತನುಣ್ಬಾತನಾತ್ಮಂ, ಅಘಜಲಧಿಯೊಳ್ ಓಲಾಡುವೊಡಂ, ಜನ್ಮಜಲಧಿಯಂ ದಾಂಟುವೊಡಂ." ಪರಮಾತ್ಮನು ಚರಮಾಂಗಪ್ರಮಿತನೂ ಅಖಿಲಲೋಕಸಮಾನನೂ, ನಿರವಯವನೂ, ನಿತ್ಯನೂ, ನಿರ್ದುರಿತನೂ ಅನಂತಬೋಧದರ್ಶನಸೌಖ್ಯನೂ ಆಗಿದ್ದಾನೆ. ಈ ಪರಮಾತ್ಮನು ಕೇವಲ ವಿಬೋಧನೇತ್ರನು. ಆಗಮವು ಅವನ ವಚನ. ಜೀವದಯೆ ಅವನನ್ನು ಆರಾಧಿಸುವ ಧರ್ಮ. ಆದ್ದರಿಂದ 'ತನ್ನಂತಿರೆ ಬಗೆವುದು ಪೆಱರಂ; ಪ್ರಾಣಿಹಿಂಸೆಯಂ ಮಾಡಲ್‌ವೇಡ; ದಯಾಮೂಲಂ ಧರ್ಮಂ' "ಮೋಗಂ ಬಗೆವೊಡೆ ವಧೆ ಹಿತಮಾಗದು; ನಿಕ್ಕಮೇ ಮಾನಸವಾಳ್? ಮೋಣ್ ಈಗಳೋ,

ಮೇಣ್ ಆಗಳೊ, ಸಾಗುದುರೆಗೆ ಪುಲ್ಲನಡಕಿ ಕೆಡುವನೆ ಚದುರಂ ?"
ಎಂಬುದೇ ಜೈನ ಧರ್ಮದ ಮೂಲತತ್ತ್ವ.

ಈ ತತ್ತ್ವವನ್ನು ಮರೆತು ಭಾವನೆಯಿಂದಾದರೂ ತನುವನ್ನು ಅಪ್ಪು ಕೆಯ್ದುದ್ದಕ್ಕಾಗಿಯೇ, ಯಶೋಧರ-ಚಂದ್ರಮತಿಯರು ನಾನಾಯೋನಿಗಳಲ್ಲಿ ಬಳಲಿ, ಬೆಂಡಾಗಿ ಕೊನೆಗೆ ಪುನಃ ಮಾನವ ಶರೀರವನ್ನು ಧರಿಸಿ, ಸುದತ್ತಾ ಚಾರ್ಯರ ಸಮುದಾಯದಲ್ಲಿದ್ದು ತತ್ತ್ವಪರಿಣತರಾಗುತ್ತಾರೆ.

ಕೊನೆಯದಾಗಿ ಜನ್ನಮಹಾಕವಿಯು ಉಪಯೋಗಿಸಿದ ಜೈನ ಪಾರಿ-ಭಾಷಿಕ ಪದಗಳ ಮೂಲಕವೂ ನಾವು ಈ ಕಾವ್ಯದಲ್ಲಿಯ ಜೈನವಾತಾ ವರಣವನ್ನು ಗುರುತಿಸಬಹುದಾಗಿದೆ. ಈ ಮೇಲಿನ ಎಲ್ಲ ಪದಗಳ ಸಂಪೂರ್ಣ ಅರ್ಥವನ್ನು ನೋಡುವುದು ಅನವಶ್ಯಕವಾದರೂ, ಅವುಗಳ ಧಾರ್ಮಿಕ ಸಂಕೇತವೇನಿದೆಯೆಂಬುದನ್ನು ತಿಳಿದುಕೊಳ್ಳುವುದು ಕಾವ್ಯದ ಜೈನವಾತಾ ವರಣದ ದೃಷ್ಟಿಯಿಂದ ಆವಶ್ಯಕ. ಆದ್ದರಿಂದ ಈ ಕೆಲವು ಪದಗಳ ಅರ್ಥ ವೇನಿದೆಯೆಂಬುದನ್ನು ನೋಡೋಣ:—

<u>ಪರೀಷಹ:</u> ಪೆತ್ತಪರೀಷಹ ಜಯಮೆ ತಪಂ—

ಸಾಧನಮಾರ್ಗದಲ್ಲಿ ಯಾರ ನಿಮಿತ್ತ ಮೂಲಕವೂ ಇರದೆ, ತಾವಾ ಗಿಯೇ ಬರುವ ಅಡ್ಡಿ ಅಡಚಣೆಗಳಿಗೆ ಪರೀಷಹಗಳೆಂದು ಹೇಳು ವುದುಂಟು. ಇವು ಎಷ್ಟೋ ಸಲ ತಪಸ್ಸಿಗೆ ಭಂಗ ತರುವಂಥವು. ಇವಕ್ಕೆ ಉದಾಹರಣೆಯಾಗಿ ಹಸಿವು ನೀರಡಿಕೆಗಳನ್ನು ಹೇಳಬಹುದು.

<u>ಆಸ್ರವ:</u> ಭಾವನೆಯಿಂದಮ್ ಅಪ್ಪುದು ಆಸ್ರವಂ—

ಜೈನ ದರ್ಶನದಲ್ಲಿ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮತ್ತು ಮೋಕ್ಷ ಎಂದು ೭ ತತ್ತ್ವಗಳು. ಚೇತನಾದಿ ಗುಣಯುಕ್ತನೂ, ಸ್ವಭಾವದಿಂದ ಶುದ್ಧನೂ ಆದ ಜೀವನು ಅನಾದಿಕಾಲದಿಂದ ಅಜೀವ ಕರ್ಮತತ್ತ್ವದೊಡನೆ ಮಿಶ್ರಿತನಾಗಿರುವನು. ಈ ಕರ್ಮದಿಂದ ಬಿಡು ಗಡೆಹೊಂದುವುದೇ ಮೋಕ್ಷ.

ಹೀಗೆ ಸ್ವಭಾವದಿಂದ ಶುದ್ಧನಾದ ಜೀವನು, ಜೀವಭಿನ್ನವಿಷಯಗಳಲ್ಲಿ ರಾಗದ್ವೇಷವುಳ್ಳವನಾಗಲು, ಆ ಜೀವನಲ್ಲಿ ಕರ್ಮಪುದ್ಗಲಗಳ "ಆಸ್ರವವು" ಅಂದರೆ "ಪ್ರವೇಶವು" ಉಂಟಾಗುವದು.

ಈ ಆಸ್ರವವು ಶುಭ–ಅಶುಭ–ಎಂದು ಎರಡು ಬಗೆಯಾಗಿದೆ. ಶುಭದಿಂದ ಜೀವನು ಸ್ವರ್ಗಸುಖವನ್ನೂ, ಅಶುಭದಿಂದ ನರಕಾದಿ ದುಃಖಗಳನ್ನೂ ಅನುಭೋಗಿಸುವನು. ಆಸ್ರವ ಕಾಲದಲ್ಲಿಯ ಈ ಕರ್ಮಪುದ್ಗಲಗಳು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ ಮೊದಲಾಗಿ ಎಂಟು ಬಗೆಯಾಗಿವೆ. ಜೀವನಸ್ವಭಾವವನ್ನು ಮುಚ್ಚುವುದು ಜ್ಞಾನಾವರಣೀಯ; ದರ್ಶನಗುಣವನ್ನು ಮುಚ್ಚುವುದು ದರ್ಶನಾವರಣೀಯ; "ಜೀವನ ಸಮ್ಯಕ್ತ್ವವನ್ನೂ, ಚಾರಿತ್ರಗುಣವನ್ನೂ ಘಾತಿಸಿ, ಜೀವನಿಗೆ ಅತತ್ವಗಳಲ್ಲಿ ಶ್ರದ್ಧೆಯನ್ನೂ ಲೋಭವನ್ನೂ ಉಂಟುಮಾಡುವುದು ಮೋಹನೀಯ ಕರ್ಮವು"…. ಅಂತರಾಯದಿಂದ ದಾನಾದಿಸತ್ಕರ್ಮಗಳಲ್ಲಿ ವಿಘ್ನವುಂಟಾಗುತ್ತದೆ. ಆದ್ದರಿಂದ ಮನೋವಾಕ್ಕಾಯಗಳ ಕ್ರಿಯೆಯು ಕರ್ಮವೆಂದು, ಅದೇ ಆಸ್ರವವೆಂದೂ ಹೇಳಲಾಗುತ್ತದೆ: ಕಾಯವಾಙ್ಮನಃ ಕರ್ಮಯೋಗಃ— ಸ ಆಸ್ರವಃ—ಎಂದು. ಯಶೋಧರ ನೃಪತಿಯು ತನ್ನ ನಿಜವಾದ ತತ್ವಗಳನ್ನು ಮರೆತು ಅತತ್ವಗಳಲ್ಲಿ ಶ್ರದ್ಧೆಯನ್ನಿಡಲು ಮನಸ್ಸು ಮಾಡಿದ್ದರಿಂದ ಮೋಹನೀಯಕ್ಕೆ ಎಡೆಗೊಟ್ಟನೆಂದು ಹೇಳಬೇಕು.

<u>ಅವಧಿಜ್ಞಾನ</u>:— "ಸ್ಥೂಲೇಂದ್ರಿಯಗಳಿಗೆ ಗೋಚರವಾಗುವ ಅವಧಿಯ ಆಚೆಗಿರುವ ಸಮಸ್ತ ರೂಪವಿಶಿಷ್ಟ ದ್ರವ್ಯಗಳ ಅಸಾಧಾರಣ ಅನುಭೂತಿಯು ಅವಧಿಜ್ಞಾನವು….ಈ ಅವಧಿಜ್ಞಾನದಲ್ಲಿ ದೇಶಾವಧಿ, ಪರಮಾವಧಿ, ಸರ್ವಾವಧಿ ಎಂದು ಮೂರು ಬಗೆಗಳುಂಟು.

<u>ಗಮನಪ್ರಾಯಶ್ಚಿತ್ತ</u>:— ಜೀವದಯೆಯಲ್ಲಿ ತುಂಬಾ ಶ್ರದ್ಧೆಯಿಟ್ಟ ಜೈನಮತದ ಪ್ರಕಾರ ಪ್ರತಿಯೊಬ್ಬ ಜೈನಯತಿಯೂ ತನ್ನ ಹೆಜ್ಜೆಯಲ್ಲಿ ಯಾವ ಜೀವಿಯೂ ಸಿಗದಂತೆ ನೋಡಿಕೊಳ್ಳಬೇಕು. ಆದರಿಂದ ಪ್ರತಿಯೊಬ್ಬ ಯತಿಯೂ ತಾನು ನಡೆಯುವಾಗ ತನ್ನಿಂದ ೩|| ಗಜ ದೂರ ಕಣ್ಣಿಟ್ಟಿರಬೇಕು. ಇಂಥ ಪ್ರಸಂಗದಲ್ಲಿ ಏನಾದರೂ ಪ್ರಾಣಿಹಿಂಸೆ ನಡೆದಿರಬಹುದಾದ ಸಂದೇಹಪರಿಹಾರಕ್ಕಾಗಿ ಮಾಡುವ ಪ್ರಾಯಶ್ಚಿತ್ತಕ್ಕೆ ಗಮನ ಪ್ರಾಯಶ್ಚಿತ್ತವೆನ್ನುತ್ತಾರೆ.

<u>ಈಶಾನಕಲ್ಪ</u>:— ಜೈನ ಲೋಕವರ್ಣನೆಯಲ್ಲಿ ಈ ಮಾತು ಬರುತ್ತದೆ. ಜೈನ ಸೃಷ್ಟಿಶಾಸ್ತ್ರದ (Cosmogony) ಪ್ರಕಾರ ಈಶಾನ ಕಲ್ಪವು ಊರ್ಧ್ವಲೋಕದ ಹದಿನಾರು ಕಲ್ಪ ಇಲ್ಲವೆ ಸ್ವರ್ಗಗಳಲ್ಲಿ ಎರಡನೆಯದು.

ಊರ್ಧ್ವಲೋಕವೆಂದರೆ ವೈಮಾನಿಕ ದೇವರು ವಾಸಿಸುವ ಲೋಕ. ಅದು ಸುಮೇರು ಪರ್ವತದ ಶಿಖರದಿಂದ ಪ್ರಾರಂಭವಾಗುತ್ತದೆ. ಮೊದಲನೆಯದಾದ ಸೌಧರ್ಮ ಕಲ್ಪವು ಉತ್ತರಕ್ಕೆ ಹಬ್ಬಿದ್ದರೆ, ಈಶಾನ ಕಲ್ಪವು ದಕ್ಷಿಣಕ್ಕಿರುವದು. ಈಶಾನೇಂದ್ರನು ಇದರ ಒಡೆಯನು.

ಧೂಮಪ್ರಭೆ:— ಈಶಾನ ಕಲ್ಪವು ಊರ್ಧ್ವಲೋಕದಲ್ಲಿದ್ದಂತೆ, ಧೂಮಪ್ರಭೆ ಎಂಬ ನರಕವು ಅಧೋಲೋಕದಲ್ಲಿದೆ. ಜೈನರ ಪ್ರಕಾರ ಈ ಅಧೋಲೋಕಗಳು ೭. ನರಕಗಳೆಲ್ಲ ಈ ಅಧೋಲೋಕಗಳಲ್ಲಿವೆ ಇವುಗಳಲ್ಲಿ ಧೂಮಪ್ರಭೆ ಐದನೆಯದು. ಇದಕ್ಕೆ 'ಅರಿಷ್ಟಾ' ಎಂದೂ ಕರೆಯುತ್ತಾರೆ. ಈ ಐದನೆಯ ನರಕದಲ್ಲಿ ಮೂರು ಲಕ್ಷ ಬಿಲಗಳುಂಟು. ಅನೇಕ ಪಾಪಗಳನ್ನು ಮಾಡಿದ ಅಮೃತಮತಿಯು ಈ ಧೂಮಪ್ರಭೆ ನರಕಕ್ಕೆ ಬರುತ್ತಾಳೆ

ಅಣುವ್ರತಗಳು:— ಅಶುಭ, ಶುಭ, ಮತ್ತು ಶುದ್ಧವೆಂದು ಮೂರು ವಿಧವಾದ ಉಪಯೋಗವುಳ್ಳ ಜೀವನಿಗೆ ಶುಭೋಪಯೋಗವು ಗ್ರಾಹ್ಯವಾಗಿದೆ. ಇದಕ್ಕಾಗಿ ವ್ರತವನ್ನು ಮಾಡಬೇಕಾಗುತ್ತದೆ. ಹಿಂಸೆ, ಅನೃತ, ಚೌರ್ಯ, ಅಬ್ರಹ್ಮ (ಪರಸ್ತ್ರೀ ಸೇವನ), ಪರಿಗ್ರಹ ಇವುಗಳಿಂದ ಬುದ್ಧಿಪೂರ್ವಕ ವಿರಕ್ತನಾಗಿರುವುದೇ ವ್ರತವೆನಿಸುವುದು.

ಈ ವ್ರತಗಳು ಮಹಾವ್ರತ, ಅಣುವ್ರತವೆಂದು ಎರಡು ಬಗೆಯಾಗಿವೆ. ತ್ರಸ, ಸ್ಥಾವರ--ಎರಡೂ ಬಗೆಯ ಹಿಂಸೆಯನ್ನು ಬಿಡುವುದು ಮಹಾವ್ರತವು. ಸ್ಥಾವರ ಹಿಂಸೆಯು ಅನಿವಾರ್ಯವೆಂದು ತಿಳಿದು ಕೇವಲ ತ್ರಸವನ್ನು ಬಿಡುವುದು ಅಣುವ್ರತವು. ಸಮಗ್ರಸ್ತ್ರೀ ಪರಿತ್ಯಾಗವು ಮಹಾವ್ರತ ಕೇವಲ ಪರಸ್ತ್ರೀಪರಿತ್ಯಾಗವು ಅಣುವ್ರತ. ಆದ್ದರಿಂದ ಹೆಚ್ಚು ಘೋರವಾದ ಮಹಾವ್ರತವು ಮುನಿಗಳಿಗೆ ಮಾತ್ರ ಸಾಧ್ಯ. ಅಣುವ್ರತವನ್ನು ಗೃಹಸ್ಥರೂ (ಶ್ರಾವಕರೂ) ಆಚರಿಸಬಹುದು.

ಈ ರೀತಿಯ ವ್ರತಗಳಿಗೆ ಪ್ರತಿವೊಂದಕ್ಕೆ ಐದೈದು ಚಿಂತನೆ (ಭಾವನೆ) ಗಳನ್ನು ಹೇಳಿದ್ದಾರೆ. ಉದಾಹರಣೆಗೆ ಹಿಂಸೆಯನ್ನು ತಪ್ಪಿಸಲು ವಚನ ಮನಸ್ಸುಗಳನ್ನು ತಡೆಯುವುದು ಇತ್ಯಾದಿ. ಸ್ತ್ರೀವಿರತಿಗೆ—ಸ್ತ್ರೀವಿಷಯಕ ಕಥೆಗಳನ್ನು ಕೇಳದಿರುವುದು ಉದ್ದೀಪಕ ಪುಷ್ಟಿಜನಕ ಆಹಾರತ್ಯಾಗ, ಸೊಗಸಿನ ವಸ್ತ್ರತ್ಯಾಗ ಇತ್ಯಾದಿ.

ಈ ರೀತಿ ಅಣು ಮತ್ತು ಮಹಾವ್ರತಗಳನ್ನು ಆಚರಿಸುವವರು ಮಾಯೆ, ಮಿಥ್ಯಾತ್ವ ಮತ್ತು ನಿದಾನ—ಎಂಬ ಮೂರು "ಶಲ್ಯ"ಗಳ ಬಾಧೆಯನ್ನು ತಪ್ಪಿಸಿದವರಾಗಿರಬೇಕು. ಮನಸ್ಸಿನಲ್ಲೊಂದು ಕೃತಿಯಲ್ಲೊಂದಿರುವುದು ಮಾಯೆ; ತತ್ವಗಳಲ್ಲಿಯ ಅಶ್ರದ್ಧೆ ಮಿಥ್ಯಾ; ಮುಂದು ಇಂತಹ ಉಪಭೋಗಗಳು ದೊರಕಬೇಕೆಂದು ವ್ರತಗಳನ್ನಾಚರಿಸುವುದು ನಿದಾನ. ಅಂತಲೇ ಅಕಂಪನ ಮಹರ್ಷಿಗಳು ಚಂಡಕರ್ಮನಿಗೆ ಈ ರೀತಿ ಉಪದೇಶಿಸುತ್ತಾರೆ :-

ಕೊಲಲುಂ ಪುಸಿಯಲುಂ ಆಗದು;
ಸಲಲಾಗದು ಪೆಱರ ಪೆಂಡಿರೊಳ್; ಕಳವಂ ಅಣಂ
ಕಳಲಾಗದು; ತೀರದುದಕ್ಕೆ
ಅಲವಱಲಾಗದು, ಪರಸ್ತ್ರೀಯುಂ ಬಯಸುವನಂ ||

ಎಂದು ಹೇಳುತ್ತಾರೆ. ಅಷ್ಟೇ ಅಲ್ಲದೆ,

"ಇವು ಮೊತ್ತಮೊದಲ ಅಣುವ್ರತಮ್; ಇವು ಮಸುಳದೆ ನಡೆದೊಡೆ ಐಹಿಕ ಆಮುತ್ರಿಕಮೆಂಬಿವಱೊಳ್ ಸಮಸುಖಿಯಪ್ಪಂ" ಎಂದು ಹೇಳುತ್ತಾರೆ

ಈ ರೀತಿಯ ಅಬ್ರಹ್ಮ ಅಸ್ತೇಯಾದಿಗಳು ಉಳಿದಮತಧರ್ಮಗಳಿಗೂ ಸಾಮಾನ್ಯವಾಗಿವೆಯೆಂಬುದನ್ನು ನಾವು ಗಮನಿಸಬೇಕು. ಬಸವಣ್ಣನವರು ಸಹ "ಕಳಬೇಡ, ಕೊಲಬೇಡ, ಹುಸಿಯನುಡಿಯಲು ಬೇಡ"— ಎಂದು ಮೊದಲಾಗಿ ಈ ವ್ರತಗಳನ್ನೇ ಸರಳವಾದ ಮಾತಿನಲ್ಲಿ ತಮ್ಮ ವಚನಗಳಲ್ಲಿ ಹೇಳಿದ್ದಾರೆ.

ಜನ್ನನ ಪಾತ್ರಸೃಷ್ಟಿ:—

ಮೇಲೆ ವಿವರಿಸಿದಂತೆ ಜನ್ನನ ಕಾವ್ಯದಲ್ಲಿ ಅನೇಕ ವಿಧವಾಗಿ ಜೈನ ವಾತಾವರಣವನ್ನು ಕಾಣಬಹುದಾದರೂ ಯಶೋಧರ-ಅಮೃತಮತಿಯರ ಪ್ರಣಯ ಕಥೆಯೇ ಜನ್ನನ ಕೀರ್ತಿಸ್ತೂಪ. ಜನ್ನನ ಪಾತ್ರನಿರ್ಮಾಣದಲ್ಲಿ ಬಾಣಕಾದಂಬರಿಯಲ್ಲಿಯಂತೆ ಅನೇಕ ಜನ್ಮಾಂತರಗಳು ಬಂದಿದ್ದರೂ, ಅವೆಲ್ಲಕ್ಕೂ ಈ ಯಶೋಧರ ಅಮೃತಮತಿಯರ ಕಥೆಯೇ ಮೂಲ. ಹೀಗಾಗಿ ಅನೇಕ ಓದುಗರು ಜನ್ನನ ಧರ್ಮವಿವರಣೆಯನ್ನು ಸಂಪೂರ್ಣವಾಗಿ ಮರೆಯಬಹುದು; ಆದರೆ ಯಾರೂ ಈ ಯಶೋಧರ-ಅಮೃತಮತಿಯರ 'ಪ್ರಣಯ ಕಥೆ'ಯನ್ನು ಮರೆಯಲಾರರು. ಆದ್ದರಿಂದ ಯಶೋಧರಚರಿತೆಯು ಆಕರ್ಷ

ಣವು ಅದರ ಪ್ರಣಯಕಥೆಯಲ್ಲಿಯೋ ಇದೆಯೆಂದು ಹೇಳಬಹುದು. ಹಾಗಾದರೆ ಈ ಇಬ್ಬರೂ ಪ್ರಣಯಿಗಳ ಸ್ವಭಾವ-ನಡತೆಗಳೇನು ವಿಚಾರಿಸೋಣ :-

ಯಶೋಧರ ಅರಸನು ತುಂಬಾ ಸುಂದರ; ಜನಮೋಹನ ಬಾಣ; ಸಾಮರ್ಥ್ಯಯುತ, ಆದರ್ಶಪ್ರಣಯಿ; ಮಾತೃಪ್ರೇಮಿ; ಯುಕ್ತಾಯುಕ್ತ ಪರಿಜ್ಞಾನವುಳ್ಳವ ಮತ್ತು ನಿಜವಾದ ಜಿನಭಕ್ತ. ಅವನ ಧರ್ಮ ಕಲ್ಪನೆ ಕೇವಲ ಹೊರಗಿನ ಲೇಪವಲ್ಲ; ಒಳಗಿನಿಂದ ಅರಳಿದುದು. ಹೀಗಾಗಿ ಅವನ ಜೀವನದ ದುರಂತತೆಯನ್ನು ಕಂಡಾಗ ಮನಸ್ಸು ಕಳವಳಿಸುತ್ತದೆ. ಇಷ್ಟು ಒಳ್ಳೆಯ ಚಾರಿತ್ರವುಳ್ಳವನೂ ಹೀಗಾಗಬೇಕಾಯಿತೇ ಎಂದು ಕಣ್ಣೀರ್ದುಂಬುತ್ತದೆ........

ಯಾಕಂದರೆ ಯಶೋಧರನ ಸೌಂದರ್ಯವೆಂದರೆ ಆಡಿ ಮುಗಿಸದಂತಹದು. ಅವನ ಜನನವೆಂದರೆ 'ಕರ್ಬಿನ ಬಿಲ್ಗಂ ನನೆಯ ನಾರಿಗಂ ಪುಟ್ಟಿದವೊಲ್' ಸೌಂದರ್ಯದಲ್ಲಿ ಅವನು ಕುವರ ವಿದ್ಯಾಧರ. ಅವನ ದರ್ಶನವೆಂದರೇ ಕಣ್ಣಿಗೊಂದು ಹಬ್ಬ; ಅವನ ಕೂಡ ಆಡಿದ ಮಾತು ಒಂದು 'ಶ್ರೀಮಂತ ಅನುಭವ'. ಇಂಥವನನ್ನು ಪಡೆಯುವ ಅಬಲೆಯು ನಿಜವಾಗಿಯೂ ಜೀವನದಲ್ಲಿ ತುಂಬಾ ಪುಣ್ಯವಂತಳು !

ನೋಡುವ ಕಣ್ಗಳ ಸಿರಿ, ಮಾ
ತಾಡುವ ಬಾಯ್ಗಳ ರಸಾಯನಂ, ಸಂತಸದಿಂ
ಕೂಡುವ ತೋಳ್ಗಳ ಪುಣ್ಯಂ;
ನಾಡಾಡಿಯೆ ರೂಪು ಕುವರವಿದ್ಯಾಧರನಾ?

ಜಗತ್ತಿನಲ್ಲಿ ತಾವೇ ಜಂಗಮ ಕಲ್ಪವೃಕ್ಷಗಳೆಂದು ಭಾವಿಸಿ ಹೆಕ್ಕಳಿಕೆಯಿಂದ ಮೆರೆಯುತ್ತಿರುವ ಸಾವಿರಾರು ಕಾಂತೆಯರು ಅವನ ದರ್ಶನಮಾತ್ರದಿಂದ ಪುಲಕಿತರಾಗುತ್ತಾರೆ. ನಿಜವಾಗಿಯೂ ಅವನು "ಮನುಜ ಮನೋಭವ."

ಯಶೋಧರನ ರೂಪದಷ್ಟೇ—ಅಥವಾ ಅದಕ್ಕೂ ಹೆಚ್ಚು— ಅವನ ಸಾಮರ್ಥ್ಯವು ಸರ್ವಶ್ರುತವಾದದ್ದು. ಅವನ ಸ್ವತಃ ಶ್ರೀಮಂತಿಕೆ ಹೋಗಲಿ, ಅವನಿಗೆ ಕೇವಲ "ಶುಭ"ವೆಂದ ವಂದಿಗಳ ಮನೆಯ ಅಂಗಳಗಳಲ್ಲಿ ಬೆಳೆದ ನಮೇರುಮಂದಾರ ವೃಕ್ಷಗಳಲ್ಲಿ ಸ್ವತಃ ಶ್ರೀಯೇ ವನಕೇಳಿಯಾಡುತ್ತಿದ್ದಾಳೆ. ಇಡೀ ಪ್ರಪಂಚದಲ್ಲಿ ಅವನ ರಾಜದಂಡಕ್ಕೆ ಮಣಿಯದವರು ಯಾರೂ ಇಲ್ಲ. ಸಪ್ತಸಾಗರದವರೆಗೆ ಪಸರಿಸಿದ ಅವನ ರಾಜಾಜ್ಞೆಯು ಉಳಿದ ಅರಸು-ಗಿರಸು

ಗಳ ಮಣಿ ಕಿರೀಟಗಳನ್ನು ಒದೆದು, ಉರುಳಿಸಿ, ಅವರ ನೆತ್ತಿಯ ಮೇಲೆ ಕೂತಿದೆ. ಹೀಗಾಗಿ ಯಶೋಧರನಿಗೆ ಪ್ರಪಂಚದಲ್ಲಿ ಯಾವುದಕ್ಕೂ ಕೊರತೆ ಯಿಲ್ಲ. ಒಂದು ಸೌಂದರ್ಯವೇ? ಒಂದು ಗುಣವೇ? ಒಂದು ದರ್ಶನವೇ? ಯಾವುದಕ್ಕೆ ಕೊರತೆ?

ಧರ್ಮದೃಷ್ಟಿಯಲ್ಲೂ ಕೂಡ ಯಶೋಧರನು ಅಷ್ಟೇ ವೈಭವ ಪಡೆದವ. ಅವನು ಆದರ್ಶ ಜೈನ. ಅವನ ಧರ್ಮ ಕಲ್ಪನೆ ಕೇವಲ ಶಾಸ್ತ್ರದ ಹಠವಾಗಲೀ, ಇಲ್ಲವೆ ಓದಿನ ಪರಿಣಾಮವಾಗಲೀ ಆಗಿರದು. ಅವನ ಧರ್ಮವು ಒಳಗಿನಿಂದ ಮಾಗಿ ಅರಳಿ ಬಂದುದು ಆದ್ದರಿಂದ ಇಂಥ ಅಗಾಧ ಸತ್ವನೂ ಕೂಡ ಅನೇಕ ಯೋನಿಗಳಲ್ಲಿ ಜನಿಸಿ ಸಂಕಟಪಡಬೇಕಾಯಿತಲ್ಲಾ ಎಂಬುದನ್ನು ಕಂಡಾಗ ಮನಸ್ಸು ವ್ಯಥೆ ಪಡುತ್ತದೆ ಜನ್ಮ ಜಾಲಗಳ ದೃಷ್ಟಿಯಿಂದ, ಸಂಪೂರ್ಣ ತಾಳ್ಮೆಯಿಂದ, ನೋಡುತ್ತಿರುವ ನಮ್ಮ ಕವಿಗಳಿಗೇನೋ ಕೊನೆಗೆ ಯಶೋಧರನ ಚರಿತೆಯೂ ಒಂದು ಸುಖಾಂತವಾಗುತ್ತದೆ. ಆದರೆ ಸಾಮಾನ್ಯ ಜೀವಿಗಳಾದ ನಮಗೆ ಯಶೋಧರನಂಥವರೂ ಕೂಡ, ಸದ್ಗುಣ ಶಾಲಿಗಳಾಗಿದ್ದಾಗ್ಯೂ, ಈ ಜನ್ಮದಲ್ಲಿ ಒರಲಿದರೆಂಬುದನ್ನು ಕಂಡಾಗ ಮನಸ್ಸು ತಲ್ಲಣಗೊಳ್ಳುತ್ತದೆ ನಮ್ಮಲ್ಲಿ ಏಳು ಜನ್ಮಗಳ ತಾಳ್ಮೆಯಿಲ್ಲ. ಈ ದೃಷ್ಟಿಯಿಂದ ನೋಡಿದಾಗ ಸಮಗ್ರ ದರ್ಶನದ ಕಲ್ಪನೆ ಹೀಗೇ ಏನೋ ಎನಿಸುತ್ತದೆ. ನಾವು ಜೀವನವನ್ನು ಕೆಲ ಭಾಗದಲ್ಲಿ ಮಾತ್ರ ನೋಡುತ್ತಿರುವದರಿಂದ ಅದು ದುಃಖದಾಯಿಯಾಗಿ ನಮಗೆ ಕಾಣುತ್ತದೆ ಆದರೆ ಜೀವನದ ಸಮಗ್ರ ದರ್ಶನದ ದೃಷ್ಟಿಯನ್ನು ಕಂಡಾಗ ಅದು ಸುಖದಾಯಿಯಾಗಿ ಇರಲೇಬೇಕು. ಇಲ್ಲವಾದರೆ ಈ ಜೀವನದ ಆಟ ನಡೆಯುತ್ತಲೇ ಇರಲಿಲ್ಲ. ಅಂತಲೇ ಅವಸರವೇ ದುರಂತ; ತಾಳ್ಮೆಯೇ ಸುಖಾಂತವೆಂದು ಹೇಳಬಹುದು.

ಹಾಗಾದರೆ ಈ ಯಶೋಧರ ಅರಸನ ದುಃಖದ ಕಾರಣವಾದರೂ ಏನು? ನೋಡೋಣ. ಅದಕ್ಕಾದರೂ ಅವನೆಷ್ಟರಮಟ್ಟಿಗೆ ಹೊಣೆಗಾರ? ಈ ದೃಷ್ಟಿಯಿಂದಾದರೂ ಯಶೋಧರನ ದುರಂತವು ವಿಧಿಯ ಮಸಕವೇ ಹೊರತು ಅವನ ಸ್ವಭಾವದಿಂದ ಉದ್ಭವಿಸಿದ್ದಲ್ಲವೆಂದು ಕಾಣುತ್ತೇವೆ ಯಶೋಧರನ ದುರಂತಕ್ಕೆ ವಿಧಿಯ ಲೀಲೆ, ಅಮೃತಮತಿ ಚಂದ್ರಮತಿಯರ ಬಗ್ಗೆ ಅವನಿ

ಗಿರುವ ಮಾನವ ಸಹಜವಾದ ಅವ್ಯಾಜ ಪ್ರೀತಿಯೇ ಕಾರಣವೆಂದು ಹೇಳಬಹುದು.

ಅಮೃತಮತಿಯೆಂದರೆ ಯಶೋಧರನಿಗೆ ತುಂಬಾ ಪ್ರೀತಿ. ಅವಳು ಅವನ ಮನಃಪ್ರಿಯೆ; "ಆಕೆ ದೀವನಾಗೆ ಪುಳಿಂದಾ ಸುಮನೋಬಾಣಾ ಶದ್ ಭೂರಮಣನಂ ಒಲಿದಂತೆ ಗೋರಿಗೊಳಿಸುತ್ತಿರ್ಕುಂ" ಅಮೃತಮತಿಯೂ ಕೂಡ ಅಷ್ಟೇ ಚೆಲುವೆ. ಧೀಮಂತ ರಾಜ್ಞಿ ಯಶೋಧರ ಮತ್ತು ಅವಳು ಕೂಡಿ ಹೊರಟರೆ ಅಭ್ರಮುವೆರಸು ಅಭ್ರಗಜ ಹೊರಟ ಹಾಗೆ ಅವರ ಜೊತೆ ಚಂದ್ರಿಕೀ ಚಂದ್ರಮರ ಜೋಡು.

ಹೀಗಿರುತ್ತಿರುವಾಗ ಒಂದು ಅನಾಹುತ ನಡೆಯುತ್ತದೆ. ಒಂದು ಸಲ ದಂಪತಿಗಳೀರ್ವರೂ ಶಯ್ಯಾಗೃಹದಲ್ಲಿ ಮಲಗಿರುವಾಗ 'ಗರಟಿಗೆ' ಯ ಜಾವದ ಉಕ್ಕಡದ ಉಲಿ ಮಳ್ಗಿದ ಪೊತ್ತು ಕರುಮಾಡದ ಪಕ್ಕದಲ್ಲಿದ್ದ ಪಟ್ಟದಾನೆಯ ಬದಗನು ತನ್ನ ವಿನೋದಕ್ಕಾಗಿ ಹಾಡುತ್ತಿರುತ್ತಾನೆ. ಸುಪ್ರಭಾತದ ಶೀತಲ ವಾತಾವರಣದಲ್ಲಿ ಅವನ ಈ ಇನಿವಾಡು ಗಾಳಿಯಲ್ಲಿ ತೇಲುತ್ತ ತೇಲುತ್ತ ಬಂದು ರಾಜ್ಞಿಯ ಮಲಗಿರುವ ಕರುಮಾಡವನ್ನು ತಾಕುತ್ತದೆ. ಅದರ ಸೋಂಕು ತಾಕಿದಕೂಡಲೇ, ರಾಜ್ಞಿಯ ನಿದ್ರೆ ವ್ಯಗ್ರವಾಗುತ್ತದೆ. ಅವನ ನುಣ್ದನಿ ರಾಜ್ಞಿಯ ನಿದ್ರೆಗೆ ಕತಕ ಬೀಜವಾಗಲಾಗಿ, ಅವಳು ಮುಟ್ಟದ ಮನವನ್ನೇ ತೊಟ್ಟನೆ ಪಸಾಯದಾನವಾಗಿ ಕೊಡುತ್ತಾಳೆ. ಆಂಗ್ಲ ಕವಿಪುಂಗವ ಷೇಕ್ಸಪಿಯರನ ಸೃಷ್ಟಿಯಲ್ಲಿ ಕೇವಲ ಪ್ರಥಮ ದರ್ಶನದಲ್ಲಿಯೇ ಪ್ರೀತಿಯಿದ್ದರೆ, ಜನ್ನನ ಯಶೋಧರ ಚರಿತೆಯಲ್ಲಿ ಈ ಪ್ರಥಮ ದರ್ಶನ ಕೂಡ ಇಲ್ಲದೆ, ಕೇವಲ ಶ್ರವಣ ಮಾತ್ರೇಣ ಪ್ರೀತಿ ಘಟಿಸುತ್ತದೆ Whoever loved that loved not at first sight? ಎಂದು ಕೇಳುತ್ತಿರುವ ರೋಸೆಲಿಂಡನಕಿಂತ ಮುಂದುಅಮೃತಮತಿಯ "ಪ್ರಣಯ" ಹೋಗುತ್ತದೆ. ಈ ಗೀತವನ್ನು ಕೇಳಿದಾಕ್ಷಣವೇ ಅಮೃತಮತಿಗೆ ಆ ಹಾಡುಗಾರನನ್ನು ನೋಡುವ ಮತ್ತು ಕೂಡುವ ಚಿಂತೆ ಕಡಲುವರಿಯುತ್ತದೆ. ಆ ದಂತಿಪನ ಅತಿ ನೂತ್ನ ಗೀತಕ್ಕೆ ಅವಳು ವಿಕಲಸ್ವಾಂತೆಯಾಗುತ್ತಾಳೆ.

ಹೀಗಾಗಿ ಬೆಳಗಾಗುವದೇ ತಡ; ತನ್ನ ಮನದನ್ನಳಪ್ಪ ಕೆಳದಿಯನ್ನು ಕರೆಸಿ ತನ್ನ ಹೃದಯದ ವಾಂಛಿತವನ್ನು ಅವಳಲ್ಲಿ ತೋಡಿಕೊಳ್ಳುತ್ತಾಳೆ. ಆದರೆ ಆ ಪ್ರಕಾರ ಆದಂತಿಪನಲ್ಲಿ ಹೋದ ದಾಸಿಯು ಕಾಣುವದಾದರೂ ಏನು? ಒಬ್ಬ ಕುರೂಪಿಯಾದ ಅಧಮ ಅಷ್ಟಾವಂಕನನ್ನು ಇದನ್ನು ಕಂಡು ಅವಳು

ಕಾಮನ ಚೇಷ್ಟೆಗಾಗಿ ಮರುಗುತ್ತಾಳೆ. ನಿಜವಾಗಿಯೂ ಚೆಲುವಿನ ಕಣಿಯಾದ,

ಅಮೃತಮತಿಯೆತ್ತ! ರೂಪಾಧಮ
ಅಷ್ಟಾವಂಕನೆತ್ತ! ಚಿತ್ರಂ ಅಪಾತ್ರೇರಮತೇನಾರೀ

ಎಂಬುದು ಸಮನಿಸಿದುದು— ಬೆಂದಬಿದಿಗೆ ಕಣ್ಣಿಲ್ಲಕ್ಕುಂ ಎಂದು ಪರಿತಪಿಸುತ್ತಾಳೆ ಆದರೆ, ಹೊರಗಿನ ಹತ್ತು ಜನ ಹೀಯಾಳಿಸಿದರೂ ತನ್ನ ಬೆನ್ನನ್ನೇ ಕಾಣದಿರುವುದು ಕಾಮದ ಸಹಜ ಲಕ್ಷಣ. ದಾಸಿಯ ಕಣ್ಣಿಗೆ ಬದಗನು ಕುರೂಪನಾಗಿ ಕಂಡಿದ್ದರೂ ರಾಜ್ಞಿಗೆ ಮಾತ್ರ ಹಾಗೆ ಕಾಣಲಾರ. ಅವಳು ದಾರಿಯ ತುಂಬ ಕಣ್ಣಾಗಿ ದಾಸಿಯು ಬರವನ್ನೇ ನಿರೀಕ್ಷಿಸುತ್ತಿರುತ್ತಾಳೆ. ಅತಿಯಾದ ಉತ್ಕಂಠೆಯ ಮೂಲಕ ಅವಳ ಮುಖವು ಮ್ಲಾನವಾಗಿದೆ. ತುಟಿ ನಡಗುತ್ತಿವೆ ದೃಷ್ಟಿ ದಾರಿಯಲ್ಲಿ ಕೀಲಿಸಿದೆ. ಕಾಮನ ಕೈಯ ಖಡ್ಗದ ಹಾಗೆ ಝುಳಪಿಸುವ ಕನ್ಯೆ ಬದಗನ ವಿಚಾರಕ್ಕಾಗಿ ಬಾಗಿ ನಿಂತಿದ್ದಾಳೆ. ದಾಸಿ ಬಂದವಳೇ "ನಿನ್ನ ನೂತನ ಪ್ರಿಯನಿಗೆ ಸರಿದೊರೆಯಿಲ್ಲ!" ಎಂದು ಕೊಂಕಿನಿಂದ ನುಡಿದುದನ್ನೇ,— ಕುತ್ತಿಗೆಯವರೆಗೆ ಕೆಸರಿನಲ್ಲಿ ಮುಳುಗಿದ ರಾಜ್ಞಿಯು— ನಿಜವೇ ಎಂದು ನಂಬಿ ಕೇಳುತ್ತಾಳೆ: 'ಪೇಳ್; ಪೇಳ್; ಕಾದಲನಂತಿರೆ ಚೆಲ್ವನೆ? ದೂದವಿ ನೀನೆನ್ನ ಕೊಂದೆ' ಎನ್ನುತ್ತಾಳೆ. ನಿಜವಾಗಿಯೂ ಅಮಲತಮ ರೂಪದಿಂದಲ್ಲದೆ ಇಂಥ ಸಂಗೀತ ಹೊರಡಬಹುದೇ?........ ಇನ್ನುಮೇಲೆ ಹಿಂದುಮುಂದು ಉಪಯೋಗವಿಲ್ಲವೆಂದರಿತ ದಾಸಿ ಸ್ಪಷ್ಟವಾಗಿ ಆ ಮಾವುತನ ವರ್ಣನೆಯನ್ನು ಹೇಳಿಯೇ ಬಿಡುತ್ತಾಳೆ.

ಪಱಿದಲೆ ಕುಱಿನೊಸಲಱಿಗ
ಣ್ಣೊಱಿವಾಯ್, ಹಪ್ಪಳಿಕೆ ಮೂಗು, ಮುರುಟಿದ ಕಿವಿ ಬಿ
ಬ್ಬಿಱುವಲ್ ಕುಸಿಗೊರಲ್ ಇಱಿವೆರ್ದೆ
ಪೊಱಂಟಬೆನ್ ಬಾತಬಸಿಱ್ ಅಡಾಗಿದ ಜಘನಂ ||

ಇನ್ನೂ ಏನೇನು ಬೇಕು? ಈ ಅಷ್ಟಾವಂಕನ ಸಿರುವಿಕೆಯೇ? ಬಹುಶಃ ಜಿಗಿದು ನಿಂತರೂ ಮೂರು ಘೂಟಾಗಲಾರ. ಮೆಯ್ಯೋ? ಹೊಲಸು ನಾರುತ್ತದೆ ಅವನ ಕಾಲೊ!........ "ಕಾಲ್ ಮುಱಿಯಿಸುವುದು ಟೊಂಕ ಮುಱಿದ ಕತ್ತೆಯ ಕಾಲುಂ!"

ಏನಾದರೇನು? ಎಡವಿದ ಅಮೃತಮತಿ ಪುನಃ ಮತ್ತೇಳಲಾರಳು. ಈಗ ಅವಳ ಹೃದಯವು ಆ ಅಷ್ಟಾವಂಕನಲ್ಲಿ ಲೀನವಾಗಿಬಿಟ್ಟಿದೆ. ಇನ್ನು ಅದಕ್ಕೆ ತಿರುಗಿ ದಾರಿಯಿಲ್ಲ. ಒಂದು ವಿಷಯದಲ್ಲಿ ಮೂಡಿದ ಸಮ್ಮೋಹವು —ಅದು ಎಂಥದೇ ಇರಲಿ— ಅದರ ಬಗ್ಗೆ ಸಮರ್ಥನೆಯನ್ನು ಮಾಡಿಸದೆ ಬಿಡದು. ಅಮೃತಮತಿಗೂ ಹಾಗೇ! ದಾಸಿಯ ಈ ಮಾತನ್ನು ಕೇಳಿ ಅವಳ ದೇಹವೆಲ್ಲ ಕಂಪಿಸಹತ್ತುತ್ತದೆ. ಆದರೂ ಅವಳ ಮನಸ್ಸು ಸುನಿಶ್ಚಿತ ವಾಗಿದೆ.

ಗರಗರಿಕೆ ಕೊರಲೊಳ್, ಈಕ್ಷಣದೊಳ್ ವಾರ್‌ಬಿಂದು, ಮಿಡುಕು ಎರ್ದೆಯೊಳ್ ಒದವೆ, ಪುಳಿಂದನ ಕಣೆ ನಟ್ಟುನಿಂದ ಹರಿ ಣಿಯ ಹಾಗಿದ್ದ ಚೆಲುವೆ ರಾಜ್ಞಿ ಅಮೃತಮತಿ, ದಾಸಿಗೆ ಹೇಳುತ್ತಾಳೆ:

> ಕರಿದಾದೊಡೆ ಕತ್ತುರಿಯಂ
> ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
> ಸ್ಮರಚಾಪಮಂ ಇಳಿಕೆಯ್ವರೆ
> ಮರುಳೇ ಪೊಲ್ಲಮೆಯಿ ಲೇಸುನಲ್ಲರನ್ಯೆಯ್ಯೊಳ್
> ಒಲವಾದೊಡೆ ರೂಪಿನ ಕೋಟಲೆಯೇವುದೊ?
> ಕಾರ್ಯವಾಗೆ ಕಾರಣದಿಂದಂ ಫಲವೇನು?
> ಇಂದೆನಗೆ ಆತನೆ ಕುಲದೈವಂ ಕಾಮದೇವಂ ಇಂದ್ರಂ ಚಂದ್ರಂ

ಇಂದಿನಿಂದ ರಾಜ್ಞಿಗೆ ಅವನ ಹೊರತು ಯಾವುದರಲ್ಲಿಯೂ ಮನಸ್ಸು ಸೇರದು. "ಒಲವಾದೊಡೆ ರೂಪಿನ ಕೋಟಲೆಯೇವುದೊ? ಇಂದೆನಗೆ ಆತನೆ ಕುಲ ದೈವಂ ಇಂದ್ರಂ ಚಂದ್ರಂ" ಹೀಗಾಗಿ 'ಬೇವಂ ಮೆಚ್ಚಿದ ಕಾಗೆಗೆ ಮಾವಿಳ ದಪ್ಪಂತೆ' ಅಮೃತಮತಿಗೆ ಸ್ವತಃ ತನ್ನ ಗಂಡನಲ್ಲಿ ಮನಸ್ಸು ಇಳಿಮುಖ ವಾಗುತ್ತದೆ. ಅವನನ್ನು ನೋಡಲು ಅವಳಿಗೆ ಬೇಸರ; ಮಾತಾಡಲು ಮನಸ್ಸು ಬಾರದು. ನಿರ್ವಾಹವಿಲ್ಲದೆ ಅವನೊಡನೆ ದಿನಗಳನ್ನು ಕಳೆಯು ತ್ತಾಳೆ. ಅವಳ ಈ ಬದಲಾವಣೆ ಅರಸನಿಗೂ ಆಶ್ಚರ್ಯವನ್ನುಂಟು ಮಾಡು ತ್ತದೆ. ಅವಳ ಈ ಇರವನ್ನಾದರೂ ನೋಡೋಣವೆಂಬು ಒಂದು ಸಲ ಯಶೋಧರ ಅರಸನು ಶಯ್ಯಾಗೃಹದಲ್ಲಿ ನಿದ್ರೆ ಹತ್ತಿದವರ ಹಾಗೆ ಮಲಗಿ ರಲು, ರಾತ್ರಿಯ ವೇಳೆ ನಿಧಾನವಾಗಿ ಅಮೃತಮತಿಯು ಅವನ ಅಪ್ಪುಗೆ

ಯಿಂದ ಬಿಡಿಸಿಕೊಂಡು ಜಾರನಲ್ಲಿಗೆ ಹೋಗುತ್ತಾಳೆ. ಇದನ್ನು ಕಂಡ ಅರಸನು, ದೋಷದ ಬೆನ್ನ ಹಿಂದೆಯೆ ಸಾಗುವ ದಂಡದ ಹಾಗೆ, ಅವಳ ಬೆನ್ನು ಹತ್ತಿ ಖಡ್ಗವನ್ನು ಹಿರಿದು ಹೋಗುತ್ತಾನೆ. ಆದರೆ ಅಲ್ಲಿ ಅವನು ನೋಡುವ ದೃಶ್ಯವಾದರೂ ಏನು?........ ಅಮೃತಮತಿಯು ತಡಮಾಡಿ ಬಂದಳೆಂದು ಕ್ರುದ್ಧನಾದ ಆ ಕ್ಷುದ್ರ ಅಷ್ಟಾವಂಕನು ಆಕೆಯು ತಂದ "ಮಳಯುಜ ತಾಂಬೂಲ ಜಾಲವುಂ ಕೆದರಿ, ಕುರುಳ್ಗಳಂ ಎಳೆದು," ಮನಸ್ಸು ತೃಪ್ತವಾಗುವಹಾಗೆ ಹೊಡೆಯುತ್ತಾನೆ. ಇದಕ್ಕೆ ಈ ಪತಿತಳಾದ ಅಮೃತಮತಿಯು ಹೇಳುವ ಉತ್ತರವಾದರೂ ಏನು?

"ತಡವಾದದುಂಟೆ ನಲ್ಲನೆ, ಬಡಿ ಮುಳಿಯದಿರ್ ಅರಸನೆಂಬ ಪಾತಕನೆನ್ನಂ ತೊಡೆಯೇರಿಸಿ ಕೇಳಿಕೆಯಾದೊಡೆ ನೋಡುತಿರ್ದೆಂ ಉಂತೆ ನಿಂದಿಲ್ ಅಣ್ಮುವೆನೇ?" ಎಂದು ಹೇಳುತ್ತಾಳೆ. ಅಷ್ಟೇ ಅಲ್ಲ;

"ಕಿವಿಸವಿ ಕಣ್ಸವಿ ರೂಪು ಅವಧರಿಸೆಲೆ ಗಜವೆಂಗ
ನೀನುಳಿದೊಡೆ ಸಾವವಳ್ ಎನಗೆ ಮಿಕ್ಕಗಂಡರ್
ಸವಸೋದರರ್" ಎಂದು ಹೇಳುತ್ತಾಳೆ.

ಈ ಮಾತನ್ನು ಕೇಳಿದಾಕ್ಷಣವೇ, ಯಶೋಧರನ ಕೈಯ ಖಡ್ಗವು ನಿಮಿರಿ ನಿಲ್ಲುತ್ತದೆ. ಮನಸ್ಸು ಅಲ್ಲೋಲ ಕಲ್ಲೋಲವಾಗುತ್ತದೆ. ಇಬ್ಬರನ್ನೂ ತುಂಡರಿಸಬೇಕೆಂದು ಬಯಕೆ ಮೂಡುತ್ತದೆ. ಆದರೆ ಅವನ ಆತ್ಮಿಕ ಸಂಸ್ಕಾರವು "ಬೇಡ" ಎಂದು ತಡೆಯುತ್ತದೆ *

---

*ಯಶೋಧರ ಚರಿತೆಯ ಈ ಭಾಗವನ್ನು ಓದುತ್ತಿರುವಾಗ ಅಭ್ಯಾಸಿಗಳಿಗೆ, ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ ಬರೆಯಲ್ಪಟ್ಟ 'Arden of Feversham ಎಂಬ ಇಂಗ್ಲಿಷ್ ನಾಟಕದ ಜ್ಞಾಪಕವಾಗದಿರದು. ಎರಡೂ ಕಡೆಗೆ ಬರುತ್ತಿರುವ ಕಥಾ ಸಾಂಗತ್ಯ ಮತ್ತು ಭಾರತೀಯ ಮತ್ತು ಆಂಗ್ಲ ಸಂಸ್ಕೃತಿಯ ಪ್ರತೀಕಗಳೆಂಬಂತೆ ಇಲ್ಲಿ ವ್ಯವಹರಿಸುತ್ತಿರುವ ನಾಯಕರ ನಡೆವಳಿಕೆಯ ದೃಷ್ಟಿಯಿಂದ ಎರಡೂ ಗ್ರಂಥಗಳು ತುಲನಾರ್ಹವಾಗಿವೆ:—

Arden of Fevershamದಲ್ಲಿ ಬರುವ ಕಥೆಯೂ ಹೆಚ್ಚುಕಡಿಮೆ ಇಷ್ಟೇ. ತನ್ನ ರಾಜ್ಞಿಪಟ್ಟವನ್ನು ಬಿಟ್ಟು ಚೆಲುವೆಯಾದ ಅಮೃತಮತಿಯು ಒಬ್ಬ ಕ್ಷುದ್ರ ಬದಿಗನನ್ನು ಕಾಮಿಸುವಂತೆ, ಅಲ್ಲಿಯೂ "ಎಲಿಸ್" ಎಂಬ ಸುಂದರ ಯುವತಿಯು ಕಾಮುನಂತಿದ್ದ ಶ್ರೀಮಂತನಾದ ತನ್ನ ಗಂಡನನ್ನು ಬಿಟ್ಟು "ಮೋಸ್ಬಿ" ಎಂಬ ಕ್ಷುದ್ರ ಬಣ್ಣಗಾರನನ್ನು

ಕಾಮಿಸುತ್ತಾಳೆ. ಅವಳಿಗೂ ಯಾವಾಗ ತನ್ನ ಪ್ರಣಯಿಯನ್ನು ಕೂಡೇನೋ ಎಂಬ ತವಕ. ಇಲ್ಲಿಯು ಬದಿಗನಂತೆ ಅವನೇ ಅವಳಿಗೆ ಕಾಮದೇವ, ಇಂದ್ರ, ಚಂದ್ರ ಆದ್ದರಿಂದ ದಾರಿಯಲ್ಲಿ ಕಂಟಕಪ್ರಾಯನಾಗಿದ್ದ ತನ್ನ ಗಂಡನನ್ನು ಮುಗಿಸಲು ಇಲ್ಲಿಯ ಅಮೃತಮತಿಯು ನಂಜಿನ ಲಡ್ಡುಗೆಯನ್ನು ಉಪಯೋಗಿಸಿದಂತೆ 'ಎಲಿಸ್'ಳೂ ಮೂರುನಾಲ್ಕು ಜನ ಕೊಲೆಗಡಕರನ್ನು ನಿಯಮಿಸಿ ಅವರಿಂದ ಈ ಕೆಲಸವನ್ನು ಮಾಡಿಸುತ್ತಾಳೆ. ಅದೂ ಅಲ್ಲದೆ 'ಎಲಿಸ್'ಳ ಗಂಡನು ಸಾಯಬೇಕಾದ ಕೊನೆಯ ಹೊಡೆತವು ಅವಳ ಕೈಯಿಂದಲೇ ಬೀಳುತ್ತದೆ. ಇಲ್ಲಿಯ 'ಎಲಿಸ್'ಳ ಗಂಡನೂ ಕೂಡ ಯಶೋಧರನ ಹಾಗೆ ತುಂಬಾ ಗುಣವಂತ. ಆದರೆ ದೈವಕ್ಕೆ ಆಹುತಿಯಾಗುತ್ತಾನೆ

ಕಥೆ ಹೀಗಿದ್ದರೂ ಎರಡು ಮಹತ್ವದ ವೈಷಮ್ಯಗಳನ್ನೂ ನಾವಿಲ್ಲಿ ಗಮನಿಸಬೇಕು. ಒಂದು ಅಮೃತಮತಿ ಈ ಜಗತ್ತನ್ನು ದಾಟಿ ಯಾತನೆಗಳನ್ನು ಅನುಭವಿಸಲು ಧೂಮಪ್ರಭೆಗೆ ಹೋಗಬೇಕಾದರೆ, 'ಎಲಿಸ್' ಅಷ್ಟು ಕೂಡ ದಾರಿ ಕಾಯಬೇಕಿಲ್ಲ. ತನ್ನ ಕೊಲೆಗಡಕತನ ಪತ್ತೆ ಹತ್ತಿದ್ದ ನಿಮಿಷದಲ್ಲಿಯೇ ಅವಳು ಸುಡಲ್ಪಡುತ್ತಾಳೆ. ಎರಡನೆಯದಾಗಿ, ಇಲ್ಲಿಯ ಯಶೋಧರ ಅರಸನು ಕೊನೆಯವರೆಗೂ "ಅಳಿಪುಳ್ಳೊಡೆ ನೋಡಿರಿದೊಡಂ ಅಳಿವುದೆ?" ಎಂಬುದನ್ನು ತನ್ನ ನಡೆವಳಿಕೆಯ ಸೂತ್ರವನ್ನಾಗಿ ಮಾಡಿಕೊಂಡಿದ್ದರೆ, ಅಲ್ಲಿಯ 'ಎಲಿಸ್'ಳ ಗಂಡನು ಕೊನೆಯವರೆಗೂ 'ಎಲಿಸ್'ಳನ್ನು ಮರಳಿ ಪಡೆಯಲು ಯತ್ನಿಸುತ್ತಾನೆ ಹೀಗಾಗಿ ಅವನ ಜೀವನವು ಮತ್ತಷ್ಟು ಸಂಕಟದ್ದಾಗುತ್ತದೆ. ಈ ಎರಡೂ ಮಾರ್ಪಾಡುಗಳು ಆಂಗ್ಲ ಕವಿಗಳ ಹೆಚ್ಚು ವ್ಯಾಪಾರಿಕ ದೃಷ್ಟಿಯನ್ನು ತೋರಿಸುತ್ತವೆಂಬುದನ್ನು ಗಮನಿಸಬಹುದು.

ಕೊನೆಯದಾಗಿ, ಎರಡೂ ಕಡೆಗೆ ಎಷ್ಟೋ ಸಲ ಹೆಚ್ಚು ಕಡಿಮೆ ಸಮಾನವಾಗಿ ಬರುತ್ತಿರುವ ವಿಚಾರಗಳ ಅಭಿವ್ಯಕ್ತಿಯನ್ನೂ ಕಾಣಬಹುದು

(i) ಅಮೃತಮತಿಯತ್ತ!...... ಅಪಾತ್ರೇರಮತೇ ನಾರೀ ಎಂಬುದು ಸಮನಿಸಿದುದು.

"It is not strange that women will be false and wavering."

(ii) ಇರ್ವರುಂ ಎರಳ್ಬಾಗಂ ಮಾಡಲ್ ಧೃತಿಬಂದಾಗಳ್—

to see his dssevered joints and sinews torn—

(iii) ನಲ್ಲನೆ ಬಡಿಮುಳಿಯದಿರ್ ಅರಸನೆಂಬ ಪಾತಕನೆನ್ನಂ ಇ. ಅವಧರಿಸೆಲೆ ಗಜವೆಸಂಗ, ನೀನುಳಿದೊಡೆ ಸಾವವಳ್; ಎನಗೆ ಮಿಕ್ಕ ಗಂಡರ್ ಸವಸೋದರರ್—

Nay, Mosbil, let me still enjoy thy love, And happen what will, I am resolute.

ಈಗಿನಿಂದ ಯಶೋಧರನ ಮನಸ್ಸು ಉಯ್ಯಾಲೆಯ ಹಾಗೆ ತೂಗಲು ಪ್ರಾರಂಭವಾಗುತ್ತದೆ. ಈ ರೀತಿ ತನಗಾಗಿ ಕೃತಕ ಪ್ರೀತಿಯನ್ನು ಈ ವರೆಗೆ ತೋರಿಸಿದ ಅಮೃತಮತಿಯನ್ನು ತುಂಡರಿಸಿಬಿಡುವುದೇ ? ಅಂದರೆ ಈ ನಟನೆಯಾದರೂ ನಿಂತೀತು ಎಂದು ಒಂದು ಸಲ ಕ್ರೋಧವು ಹೇಳಿದರೆ, ವೀರ್ಯವು ಹೇಳುತ್ತಿದೆ: ಪರನೃಪರನಲ್ಲದೆ ಈ ಪುಳುಕರಂ ಇಱಿವುದೆ? ಆನೆ ಆನೆಗಲ್ಲದೆ ಇರುವೆಗೆ ಮುನಿಯುವದುಂಟೇ ? ಎಂದು. ಆದರೆ, ಅದಕ್ಕೂ ಹೆಚ್ಚು ಅವನ ವಿವೇಕ ಬೇರೊಂದು ಹೆಚ್ಚಿನ ಮಾತನ್ನು ಹೇಳುತ್ತದೆ

ಅಳಿವುಳ್ಳೊಡೆ, ನೋಡಿಱಿವೊಡಂ ಅಳಿವುದೆ ?
ಪೆಣ್ ತಪ್ಪಿ ನಡೆಯೆ, ಚಿಃ ಕಿಸುಗಳಂ ಎಂದುಳಿವುದೆ ಗೆಲ್ಲಂ–

ಸ್ವತಃ ಅವಳಿಗೆ ಆ ಬದಗನಲ್ಲಿ ಮನಸ್ಸು ಆಸಕ್ತವಾಗಿದ್ದರೆ ಏನು ಮಾಡಲಿಕ್ಕೆ

---

'ಎಲಿಸ್' 'ಮೋಸ್ಬಿ'ಗೆ ಹೇಳುವ ಮಾತನ್ನೂ ಗಮನಿಸಿರಿ......

......Look on me, Mosbie, or I will kill myself;
... I will do penance for offending thee,
And burn this Prayer-book (Bible)
See, Mosbie, I will tear away the leaves, and in this golden cover shall thy letters dwell;

(iv) ಕರಿದಾದೊಡೆ ಕಸ್ತೂರಿಯುಂ ಮುರುಡಾದೊಡೆ ಮಲಯಜಂಗಳಂ ಇ.

Sweet Mosbie is as gentle as a King—
Flowers do sometimes spring in fallow lands,
Weeds in gardens; roses grow on thorns; what-soever, my Mosbie's father was, Himself is valued gentle by his worth.

(v) ಬಲವಾದೊಡೆ ರೂಪಿನ ಕೋಟಲೆಯೇವುದೊ ? ಇಂವೆನಗೆ ಅತನೆ ...ಕಾಮದೇವಂ ಇಂದ್ರಂ, ಚಂದ್ರಂ.

Alice :– There is no nectar but in Mosbie's lips! Had chaste Diana kissed him, she like me would grow lovesick and from her watery bower fling down Endymion and snatch him up.

(vi) ತಿಳಿಯಲರಿಯದು ಪೆಂಡಿರ ಕೃತಕಂ!

Oh ! how cunningly she can dissemble !

ಸಾಧ್ಯ ? ಬರ್ಕ ಹೇಳಿದ ಹಾಗೆ " Tyranny is a poor provider " ದಂಡಶಕ್ತಿ ತೀರ ಅಧಮವಾದುದು ಹೀಗಾಗಿ, ಯಶೋಧರನು ಕೊಲಲೊಲ್ಲದೆ, ಹಾಗೇ ಮರಳಿ ಬಂದು ತನ್ನ ಅರಮನೆಯಲ್ಲಿ ಮಲಗಿರಲಾಗಿ, ಅಮೃತ ಮತಿಯೂ ತನ್ನ ಗಂಡನು ಮಲಗಿರುವನೆಂದು ತಿಳಿದು ಬಂದು ಅವನ ಮಗ್ಗುಲಲ್ಲಿಯೇ ಮಲಗುತ್ತಾಳೆ. ಏನಾದರೇನು ? ಮನಸಿಜನ ಮಾಯೆ ವಿಧಿವಿಳಸನದ ನೆರಂ ಬಡೆಯೆ ಕೊಂದು ಕೂಗದೆ ನರರಂ! ಅನಂಗನ ಈ ವಿಕಾರ ಚೇಷ್ಟೆಯ ಮುಂದೆ ಯಾವ ಮಾತೂ ನಡೆಯದು. ಅನಂಗನು "ಪದವಿಯ ರೂಪಿನ ಸೊಬಗಿನ ಮದಮುಂ ಮಾಡುವರ ಮೂಗಿನೊಳ್ ಪಾತ್ರಮನಾಡದೆ ಮಾಣಂ "

ಇಂದಿನಿಂದ ಯಶೋಧರ ನೃಪತಿಗೆ ಜೀವನದ ಉಳಿದ ಯಾವ ವಿಷಯ ಗಳಲ್ಲೂ ಅಭಿಲಾಷೆಯಿಲ್ಲ. 'ಒಲಿಸಿದ ಪೆಣ್ ಪೆರರೊಳ್ ಸಂಚಲಿಸಿದೊಡೆ' ಇನ್ನು ಉಪಯೋಗವಿಲ್ಲವೆಂದು ಮುಕ್ತಿಶ್ರೀಯನ್ನು ಸಾಧಿಸಲು ನಿಶ್ಚಯಿಸು ತ್ತಾನೆ. ಆದರೇನು ? ತಾನೊಂದು ಬಯಸಿದರೆ ದೈವವು ಮತ್ತೊಂದನ್ನು ಬಯಸುತ್ತದೆ ಹೀಗೆ ಯಶೋಧರನು ನಿಶ್ಚಯಿಸಿದ ಮರುದಿವಸವೇ ಅವನಿಗೆ ರಾಣಿಯನ್ನು ಕಾಣಬೇಕಾಗುತ್ತದೆ. ಆಗ ಅವನು ಕಾಮುಕನ ನಟನೆಯಲ್ಲಿ ಅಮೃತಮತಿಯನ್ನು ಕಮಲದ ಹೂವಿನಿಂದ ತಟ್ಟುವದೇ ತಡ; ಅವಳು ನೆಲಕ್ಕೆ ಬೀಳುತ್ತಾಳೆ. ಈ ಹೀನ ನಟನೆಯನ್ನು ಸಹಿಸದ ಅರಸನು " ಅಕಟ-ಕಟನೊಂದಳ್ ಎತ್ತಿರೆ ಸುಕುಮಾರಿಯಂ ! " ಎಂದು ಕೊಂಕಿಂದ ನುಡಿಯ ಲಾಗಿ ಅರಸನಿಗೆ ತನ್ನ ತಪ್ಪು ತಿಳಿದಿದೆಯೆಂದು ಪಾದರಿಗೆ ಅರ್ಥವಾಗು ತ್ತದೆ. ಏನಾದರೂ ಅವಳೂ ಧೃತಿಗೆಡುವದಿಲ್ಲ.

ಅರಸನ ಮನಸ್ಸು ಇದರಿಂದ ಮತ್ತಷ್ಟು ಕ್ಷುಭಿತವಾಗುತ್ತದೆ ಆದರೂ ಈ ದುಃಖವನ್ನೆಲ್ಲ ನುಂಗಿ ನಿಜವಾದ ಜೈನನಾಗಿರಬೇಕೆಂದು ಯತ್ನಿಸುತ್ತಾನೆ. ಆದರೆ ವಿಧಿ-ವಿಳಸನ ಅವನಿಗಾಗಿ ಬೇರೊಂದನ್ನು ನೆಯ್ದಿರಲು ಯಾವ ಸಚ್ಚಾ ರಿತ್ರ್ಯ ಸ್ಥಿರವಾಗಿ ಉಳಿಯಲು ಸಾಧ್ಯ ?

ಯಾಕಂದರೆ ಇದೆಲ್ಲಕ್ಕೆ ಬೇಸತ್ತ ಯಶೋಧರ ನೃಪತಿಯು ತನ್ನ ತಾಯ ಬಳಿಗೆ ಹೋಗುವುದೇ ಅವನ ದುರಂತಕ್ಕೆ ಕಾರಣವಾಗುತ್ತದೆ. ಮಗನ ಕಂದಿದ ಮುಖವನ್ನು ನೋಡಿ ಸುಂದರನೂ ಸಮರ್ಥನೂ ಆದ ಯಶೋಧ ರನು ಈ ರೀತಿ ಮ್ಲಾನವದನನಾದ ಕಾರಣವನ್ನು ತಾಯಿಯು ಕೇಳುತ್ತಾಳೆ.

ಯಶೋಧರನಿಗೋ ಮನಸ್ಸಿನಲ್ಲಿಯ ಸಂಕಟವನ್ನು ನಿವೇದಿಸಲು ಇಚ್ಛೆಯಿಲ್ಲ. ಹೇಳದಿದ್ದರೆ ಮನಸ್ಸಿಗೆ ಸಮಾಧಾನವಾಗಲಾರದು. ಹೀಗಾಗಿ, ಕೊನೆಗೆ ಅರಸನು ನೆವದಿಂದ ತನ್ನ ಮನೋಗತವನ್ನು ತಿಳಿಯಪಡಿಸುತ್ತಾನೆ:

> "ದೇವಿ ಮರ ಶಂಕೆಯಿಂದೆನಗ ವುದರೊಳ್ ಕೊರತೆಯಿಲ್ಲ;
> ಪೋದಿರುಳೊಳ್ ಪೊಂದಾವರೆಗೊಳದಂಚೆ ಕಟಿಲ್ವಾವರೆ–
> ಗೊಳದೊಳಗೆ ನಲಿವ ಕನಸಂ ಕಂಡೆಂ" ಎಂದು.

ಆದರೆ ಈ ವ್ಯಾಜವೇ ಅವನ ದುಃಖಪರಂಪರೆಯ ಆದಿಬೀಜವಾಗುತ್ತದೆ. ಯಾಕಂದರೆ, ಇನ್ನೂ ಆತ್ಮಿಕವಾಗಿ ಜಿನಮತಪ್ರವಿಷ್ಟಳಾಗಿರದ ತಾಯಿಯು ಈ ಶುಭೇತರ ವಿನಾಶಕ್ಕಾಗಿ ದಾವಣಿಗುರಿಯನ್ನು ಆಹುತಿಕೊಡಬೇಕಾಗಿ ಹೇಳುತ್ತಾಳೆ. ಅವಳ ಈ ಮಾತನ್ನು ಕೇಳಿದಾಕ್ಷಣವೇ ಶಾಂತಮನಸ್ಕನಾದ ಯಶೋಧರನು 'ಶಾಂತಂಪಾಪಂ' ಎಂದು ಕಿವಿ ಮುಚ್ಚಿಕೊಳ್ಳುತ್ತಾನೆ. ಇದೇ ಯಶೋಧರನ ದುರಂತತೆಯ ಕೊನೆಯ ಫಲಕ. ಈಚೆ ಸಂಕಟಗಳನ್ನು ನುಂಗಿ ಸಂಸಾರವನ್ನು ಸಾಗಿಸಬೇಕು. ಇಲ್ಲವಾದರೆ ಇದನ್ನು ಬಿಟ್ಟು ಹಿಂಸೆಗಿಳಿದರೆ ಆಕಡೆ ಧರ್ಮಹಾನಿಯ ಸಮುದ್ರದಲ್ಲಿ ಕಾಲಿಡಬೇಕು. ಏನು ಮಾಡಬೇಕೆಂಬುದನ್ನು ತಿಳಿಯದೆಯೆ ಅವನು ಡೋಲಾಯಮಾನ ಮಾನಸನಾಗುತ್ತಾನೆ. ಅಂತಲೇ ನಿಜವಾದ ಜಿನಭಕ್ತನೂ, ಧರ್ಮಜ್ಞನೂ, ಸಾತ್ವಿಕನೂ ಆದ ಅರಸನು ತಾಯಿಗೆ ಸ್ಪಷ್ಟವಾಗಿ ಹೇಳುತ್ತಾನೆ:—

> ರೋಗಂ ಬಗೆವೊಡೆ ವಧೆಹಿತವಾಗದು
> ಮರ್ತ್ಯಂಗೆ ನಿತ್ಯಮೋ ಮಾನಸಮಾಳ್ ?
> ಈಗಳೊ ಮೇಣ್ ಆಗಳೊ ಮೇಣ್
> ಸಾಗುದುರಗೆ ಪುಲ್ಲನಡಕಿ ಕೆಡುವನೆ ಚದುರಂ ?

ಎಂದು ಸ್ಪಷ್ಟವಾಗಿ ಹೇಳುತ್ತಾನೆ ಆದರೂ ತಾಯಿಯ ಮಿಥ್ಯಾಜ್ಞಾನವೂ ಮತ್ತು ಮೋಹವೂ ಅವನನ್ನು ಬಿಡಲಾರವು. ಈ ವಚನವನ್ನು ಕೇಳಿದ ಅವನ ತಾಯಿಯು "ನೃಪೇಂದ್ರನ ಮುಂದಣಗತಿಗಪ್ಪ ಬಟ್ಟೆಯಂ ಕಟ್ಟುವವೊಲ್" ಮುಳಿದು ನಿಜಮೋಹದಿಂದ ಆದೇಶಿಸುತ್ತಾಳೆ.

> ಪರಿಹರಿಸೆಯೆಮ್ಮ ನುಡಿಯಂ
> ಗುರುವಚನಂ ಅಲಂಘನೀಯಮ್ ಎನ್ನದೆ ನೀನಾದರದಿಂ

ಕೈಕೊಳ್; ಧರ್ಮದೊಳ್ ಅರಸುಗಳೇಂ ಶಾಂತಿ-
ಯೆಂದೊಡೆ ಅನುಸರಿಸರೆಪೇಳ್"

ಆದ್ದರಿಂದ ಆವಳ ಮಾತಿನಲ್ಲಿ ಮೂರು ಸಮರ್ಥನೆಗಳಿವೆ. ಒಂದು ಹಿರಿಯರ ಮಾತು ಎಂದಿಗೂ ಅಲಂಘನೀಯ; ಎರಡನೆಯದಾಗಿ "ಪರಿಹರಿಪೆ ಎನ್ನ ನುಡಿಯಂ"— ತಾನು ಸ್ವತಃ ಇಂಥ ಹಿರಿಯಳಾಗಿರುವಳಲ್ಲದೆ, ತಾಯಿಯಾಗಿದ್ದಾಳೆ ಮೂರನೆಯದಾಗಿ ಪ್ರಜೆಗಳ ಉದ್ಧಾರಕ್ಕಾಗಿ ರಾಜ್ಯ ವನ್ನಾಳುತ್ತಿರುವ ಅರಸರು ಧರ್ಮಕ್ಕಾಗಿ ಶಾಂತಿ ಮಾಡಬೇಕೆಂದು ಹೇಳಿದರೆ ಮಾಡಲಾಗದೆ? ಇದಕ್ಕೆ ಯಶೋಧರನು ಏನನ್ನು ಹೇಳಬೇಕು?.... ಆದರೂ ಅವನ ಪ್ರಜ್ಞೆಯು ಸುನಿಶ್ಚಲವಿದೆ. ಮೊದಲಿನ ಎರಡು ಮಾತನ್ನಂತೂ ಬಿಡೋಣ. ಮೂರನೆಯದಕ್ಕೆ ಅವನ ಉತ್ತರ ಸಿದ್ಧವದೆ ಧರ್ಮದೃಷ್ಟಿಯಿಂದ ಶಾಂತಿ ಮಾಡಬೇಕಾದರೆ ಅರಸನಾದವನೇನು ಮಾಡಲಾಗದೆ?" ಸರಿ, ಧರ್ಮದ ಸ್ಪಷ್ಟಕಲ್ಪನೆಯುಳ್ಳ ಯಶೋಧರ ನೃಪತಿಯು ಹೇಳುತ್ತಾನೆ. ಯಾವುದು ಧರ್ಮ? ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ಆಡಿದ ಪ್ರತಿ ಯೊಂದು ಅವಿವೇಕದ ಮಾತೂ ಧರ್ಮವಾದೀತೇ? ಇಂಥ ಪ್ರಾಣಿಹಿಂಸೆ ಎಂದಿಗಾದರೂ ಧರ್ಮಸ್ವರೂಪವಾದೀತೇ? ಅದಕ್ಕಂತಲೇ ಅವನು ಅವಿವೇಕ ದಿಂದ ಶಾಂತಿಯನ್ನು ಮಾಡಲಾಗಿ ಬೇತಾಳ ಹುಟ್ಟುವ ರೀತಿಯಲ್ಲಿ ಕಂಡು ದನ್ನು ಧರ್ಮವೆಂದು ನಂಬಲಾಗದೆಂದು ಹೇಳುತ್ತಾನೆ.

ಜೀವದಯೆ ಜೈನ ಧರ್ಮಂ
ಜೀವಹಿತಂ ನಂಬುವವರ್ಗೆ ಹಿಂಸೆಯು ಮೋಹಂ
ಭಾವಿತಮೆ ತಪ್ಪಿನುಡಿದಿರ್
ಕಾವರೆ ಕಣೆಗೊಳ್ವೊಡಬ್ಬೆ ಬಾರಿಪರೊಳರೆ?

ಸಮ್ಯಗ್ ಜ್ಞಾನವುಳ್ಳ ಯಶೋಧರನು ತನ್ನ ತಾಯಿಗೆ "ತಪ್ಪಿನುಡಿದಿರ್" ಎಂದು ಸ್ಪಷ್ಟವಾಗಿ ಹೇಳುತ್ತಾನೆ ಆದರೂ ತಾಯಿಯ ಬಲವಂತ ನಿಲ್ಲು ವಂತಿಲ್ಲ.

ಆದೊಡೆ ಪಿಟ್ಟಿನ ಕೋಳಿಯನಾದೊಡಂ ಇಂದೊಂದಂ ಇಕ್ಕ ವೇಳ್ಕುದು. ಇಲ್ಲವಾದರೆ, ತಾಯಿಯಾದ ತಾನು "ದೇವಿಗೆನ್ನನಿಕ್ಕಿಯುಂ ಈ ದುರಿತಮನಿಂದು ಮಗನೆ ಪರಿಹರಿಸದಿರೆಂ" ಎಂದು ಹೇಳುತ್ತಾಳೆ. ಈಗ ನೃಪತಿಗೆ ಏನು ಮಾಡಬೇಕೆಂಬುದು ತಿಳಿಯದಾಗುತ್ತದೆ. ಒಂದು ಕಡೆಗೆ

ಸಮ್ಯಗ್‌ಜ್ಞಾನವು ತಾನು ಮಾಡಬೇಕಾದುದು ತಪ್ಪೆಂದು ಹೇಳುತ್ತದೆ. "ಜೀವದಯೆ ಜೈನಧರ್ಮಂ", ಮತ್ತೊಂದುಕಡೆಗೆ ಜನ್ಮವಿತ್ತ ಪ್ರೀತಿಯ ತಾಯಿಯ ಆತ್ಮಾಹುತಿಯಿದೆ ಈ ಎರಡೂ ಕಂದರಗಳಲ್ಲಿ ಯಾವುದನ್ನು ಆರಿಸಬೇಕು ? ಜೀವಹಿಂಸೆಯನ್ನು ತಪ್ಪಿಸಬೇಕೆಂದರೆ ಹಿಟ್ಟಿನ ಕೋಳಿಯ ನೆಪವೇನೋ ಇದೆ. ಆದರೂ ಯಶೋಧರ ನೃಪತಿಯ ಧರ್ಮದೃಷ್ಟಿ ಅವನಿಗೆ ಹೃದಯದ ಕಾವಳವನ್ನು ಎಂದಿಗೂ ತರುವದಿಲ್ಲ. ಕೊನೆಯವರೆಗೂ ಅವನ ಧರ್ಮದೃಷ್ಟಿ ಅಷ್ಟೇ ಪರಿಶುದ್ಧವಾಗಿದೆ. ದರ್ಶನದಲ್ಲಿ ಅವನಿಗೇನೂ ಚ್ಯುತಿಯಿಲ್ಲ. ಆದರೂ ತಾಯಿಯ "ಮೋಹಕ್ಕಾಗಿ" ಅವನು ಈ ಕ್ರಿಯೆಗೆ ಒಡಂಬಡುತ್ತಾನೆ. ಅವನಿಗೆ ತಾನು ಗೈಯುವ ಪಾಪದ ಅರಿವು ತುಂಬಾ ಇದೆ. ಆದರೂ ತಾಯಿಯ ಜೀವಹಾನಿಯನ್ನು ಸಹಿಸಲಾರದೆ ಅವಳ ಮಾತಿಗೆ ಒಡಂಬಡುತ್ತಾನೆ. ಹೀಗಾಗಿ, ಕಣ್ದೆರೆದೇ ಬಾವಿಯಲ್ಲಿ ಕಾಲಿಡುವ ಯಶೋಧರನ ನೈಜ-ಸ್ವಭಾವದಲ್ಲೇನೂ ಅಂಥ ಮಹತ್ವದ ಚ್ಯುತಿಯಿಲ್ಲ.

ಎನೆತಾಯ ಮೋಹದಿಂದಂ ಜನಪಂ ಒಡಂಬಟ್ಟು
ಮನದೊಳ್ ಇಂತೆಂದಂ ಭಾವನೆಯಿಂದಮ್ ಅಪ್ಪುದು ಆಸ್ರವಮ್
ಎನಗಿನ್ನೆಂತಪ್ಪ ಪಾಪಮ್ ಇದಿರ್‌ವಂದಪುದೋ
ಮಾಡದೊಡೆ ತಾಯ್ಗೆ ಮರಣಂ; ಮಾಡಿದೊಡೆ ಎನ್ನೊಂದು
ಗತಿಗೆ ಕೇಡು; ಇನ್ನೇನಂ ಮಾಡುವೆನೆಂದು ಆಂದೋಲಮನಾಡೆಮನಂ,
ತಮುಮಂ ಅಪ್ಪುಕೆಯ್ದಂ ಇಳೇಶಂ"

ಹೀಗಾಗಿ, ಚುತಿಯನ್ನು ಹೊಂದಿ ಒಬ್ಬ ಕ್ಷುದ್ರ ಸೇವಕನ ಕೂಡ ಸರಸವನ್ನಾಡುತ್ತ, ತನ್ನನ್ನೇ ಹೀಗಳೆಯುತ್ತಿರುವ ಹೆಂಡತಿಯನ್ನು ಪ್ರತ್ಯಕ್ಷ ಕಂಡೂ, ಮನಸ್ಸಿನ ಸ್ತಿಮಿತವನ್ನು ಇಟ್ಟುಕೊಂಡ ಯಶೋಧರನೃಪತಿಗೆ ತಾಯ-ಮೋಹಕ್ಕಾಗಿ ತಮುವನ್ನು ಅಂಗೀಕರಿಸಬೇಕಾಗುತ್ತದೆ. ಕವಿಯೇ ಹೇಳಿದ ಹಾಗೆ: ಅಮೃತಮತಿಯೆಂಬ ಪಾತಕಿಯ ಮಾಯೆ ಬನಮಾಯ್ತು; ಚಂದ್ರಮತಿ ಮಾತೆಯ ಮಾತೆಮಗೆ ಬಲೆಯಾಯ್ತು; ಹಿಂಸನಮ್ ಅಮೋಘ ಶರಮಾಯ್ತು; ಕೆಡೆಮದು ಆತ್ಮಕುರಂಗಂ" ಎಂದು ಯಶೋಧರನು ಪರಿತಪಿಸುತ್ತಾನೆ. ಆದರೂ ವಿಧಿಯು ಅವನನ್ನು ಇಲ್ಲಿಯೇ ಬಿಡಲಿಲ್ಲ. ಈ ಹಿಂಸಾ

ವಧೆಯನ್ನು ಕಂಡು ಉದ್ವೇಗಮನನಾದ ನೃಪತಿಯು ರಾಜ್ಯದ ದಂದುಗವನ್ನು ಬಿಟ್ಟು ತಪಸ್ಸಿಗೆ ಹೊರಡಬೇಕೆಂದು ಸಿದ್ಧನಾದಾಗ, ಅಮೃತಮತಿಯು ವೃತ್ಯವಿನಂತೆ ಪುನಃ ಅವನ ಬೆನ್ನಟ್ಟಿ ಬರುತ್ತಾಳೆ. ಪಾದರಿಯಾದ ಅವಳಿಗೆ ತನ್ನ ಗಂಡನು ಇಷ್ಟು ಕೂಡ ನ್ಯಾಯದಿಂದ ಇರುವುದು ಬೇಡವಾಗಿದೆ. ಆದ್ದರಿಂದ ಅವಳು ತನ್ನ ಅಭೀಷ್ಟವನ್ನು ಕೇಳಿಕೊಳ್ಳುತ್ತಾಳೆ–ದಯವಿಟ್ಟು ಅರಸನು ಮತ್ತು ರಾಜಮಾತೆಯು ತನ್ನ ಅರಮನೆಯಲ್ಲಿ ಆರೋಗಿಸಬೇಕೆಂದು. ಅದಕ್ಕೆ ಮನಸ್ಸಿಲ್ಲದ ಮನಸ್ಸಿನಿಂದ ಒಡಂಬಟ್ಟ ಅರಸನನ್ನು ಕರೆದೊಯ್ದು ಅವನಿಗೆ ನಂಜಿನ ಲಡ್ಡುಗೆಯನ್ನು ಮಾಡಿ, "ಉಣ್ ಮಹಾರಾಜ" ಎನ್ನಲಾಗಿ ಅರಸನು ಸವಿದು ಉಣ್ಣುತ್ತಾನೆ. ಇಂದಿಗೆ ಅಮೃತಮತಿಯ ಆತ್ಮವು ತೃಪ್ತಿಯನ್ನು ಪಡೆಯುತ್ತದೆ. 'ಅಕಟಕಟ ನೊಂದಳ್ ಎತ್ತಿರೆ' ಎಂದು ಮೂದಲೆಯಾಡಿದ ಅರಸನಿಗೆ ಸರಿಯಾಗಿ ಮಾಡಿದೆನೆಂದು ಉಬ್ಬುತ್ತಾಳೆ. ನಿಜವಾಗಿಯೂ "ತಿಳಿಯಲರಿಯದು ಪೆಂಡಿರಕೃತಕಂ !"

ಇಂದಿನಿಂದ ಯಶೋಧರನ ಪವಿತ್ರಾತ್ಮವು ಸುಮಂಗಲವಾದ ಮಾನವ ದೇಹವನ್ನು ಹೊತ್ತುಕೊಂಡಿರುವ ಭಾಗ್ಯವನ್ನು ಕಳೆದುಕೊಳ್ಳುತ್ತದೆ ಯಾಕಂದರೆ ಆ ನಂಜಿನ ಲಡ್ಡುಗೆಯಿಂದ ಮೃತಿಹೊಂದಿದ ಅರಸನು ನವಿಲು, ಮುಳ್ಳುಹಂದಿ, ಮೀನು— ಮೊದಲಾದ ಅನೇಕ ಜನ್ಮಗಳನ್ನು ಪಡೆದು ಕೊನೆಗೆ ತನ್ನ ಪಾಪದ ಕಲ್ಮಷವನ್ನು ತೊಳೆದುಕೊಳ್ಳುತ್ತಾನೆ ಆದರೆ, ದುರ್ದೈವದಿಂದ ಅವನ ಈ ಅನೇಕ ಜನ್ಮಗಳಲ್ಲೂ ಅವನು ಜಾತಿಸ್ಮರನಾಗಿದ್ದಾನೆ. ಅಮೃತಮತಿಯ ಸೆಜ್ಜೆಯ ದವಳಾರದಲ್ಲಿ ರಾಜ್ಞಿಯು ಬದಗನ ಕೂಡ ವಿಹರಿಸುತ್ತಿದ್ದಾಗ 'ಭವರೋಷದಿಂದ' ನವಿಲು ಅಷ್ಟವಂಕನ ಕಣ್ಣನ್ನು ಇರಿಯುತ್ತದೆ ಅನಂತರ ಅವನು ಮೀನಾದಾಗಲೂ ಕೂಡ ಬ್ರಾಹ್ಮಣರು ಯಶೋಧರನು ಸ್ವರ್ಗದಲ್ಲಿ ಸುಖವಾಗಿದ್ದಾನೆ ಎಂದಾಗ ಅವನು ಮನಸ್ಸಿನಲ್ಲಿ ಮರುಗುತ್ತಾನೆ. ಹೀಗಾಗಿ, ಮಹಾಮಹಿಮನಾದ ಯಶೋಧರ ನೃಪತಿಯು ಸ್ವತಃ ತಾನು ಶುದ್ಧ ಮಾನಸನಾಗಿದ್ದರೂ, ತಾಯಮ್ಯಾಮೋಹದಿಂದ ಹಿಟ್ಟಿನ ಕೋಳಿಯನ್ನು ಕೊಂದದ್ದಕ್ಕೆ ನಾನಾಯೋನಿಗಳಲ್ಲಿ ಜೀವಿಸಿ ಕೊನೆಗೆ ತನ್ನ ಆತ್ಮದ ಉದ್ಧಾರವನ್ನು ಮಾಡಿಕೊಳ್ಳುತ್ತಾನೆ.

ಆದರೆ, ಅಮೃತಮತಿ ಮಾತ್ರ ಕೊನೆಯವರೆಗೂ ಆ ಅಷ್ಟವಂಕನಲ್ಲಿಯೇ ರಮಿಸಿ, ದಿನದಿನಕ್ಕೆ ಪಾಪಕೂಪದಲ್ಲಿ ಹೆಚ್ಚೆಚ್ಚು ಇಳಿಯುತ್ತ, ಕೊನೆಗೆ

ಧೂಮಪ್ರಭೆ ಎಂಬ ನರಕವನ್ನು ಸೇರುತ್ತಾಳೆ. ಅವಳು ಬದುಕಿದ್ದಾಗ ಕೂಡ ಅವಳ ಬಾಯ್‌ಸವಿಯ ನಾಯ್-ಬಸನಿಗತನಕ್ಕೆ ಸ್ವತಃ ಅವಳ ದಾಸಿಯರೇ ಅವಳನ್ನು ಕಂಡಂತೆ ಟೀಕಿಸುತ್ತಾರೆ. "ಮಾಣ್ದೀಕಿಸುಗುಳಿಯಂ ಜವನುಂ ಉಯ್ಯಲೇಂ ಪೇಸಿದನೊ!" ಎಂದು

ಮದನನ ಮಾರಂಕದ ಚೆಂದದ ಗಂಡನಂ
ಅಮೃತದನ್ನಳತ್ತೆಯುಂ ಇವಳ್ ಓವದೆ ಕೊಂದಳ್
ಪಾಪಂ ತಿನ್ನದು; ಪಾತಕಿಪುಳಿತೊಡಲ್ಲದೇಂ
ಸತ್ತಪಳೆ ? ಎಂದು ತಮ್ಮಲ್ಲಿಯೇ ಗುಜಗುಜಿಸುತ್ತಾರೆ.

ಹೀಗಾಗಿ, ಈ ಇಡೀ "ಯಶೋಧರ ಚರಿತೆ"ಯಲ್ಲಿ ಎಷ್ಟೇ ಉದಾತ್ತ ತತ್ವಜ್ಞಾನವಿದ್ದರೂ ಈ ಪ್ರಣಯಕಥೆಯಷ್ಟು ಅದು ಜನಪ್ರಿಯವಾಗಲಿಲ್ಲ.

---

# ಜನ್ನನ ಶೈಲಿ

ಯಶೋಧರ ಚರಿತೆಯಲ್ಲಿಯ ಜೈನವಾತಾವರಣ ಮತ್ತು ಪಾತ್ರಸೃಷ್ಟಿಗಳನ್ನು ನೋಡಿಯಾದ ಮೇಲೆ ಜನ್ನನ ಶೈಲಿಯ ಕೆಲವು ಲಕ್ಷಣಗಳನ್ನೂ ನೋಡೋಣ :

ಜನ್ನನಲ್ಲಿರುವ ಅನೇಕ ಒಳ್ಳೆಯ ಗುಣಗಳನ್ನು ಮೆಚ್ಚಿ ಅವನ ಗುರುತ್ವವನ್ನು ಕೂಡ ಹಲವು ಕವಿಗಳು ಅಂಗೀಕರಿಸಿದರೆಂಬುದನ್ನು ಈ ಮೊದಲೇ ವಿವರಿಸಲಾಗಿದೆ. ಅವರು ಇವನಲ್ಲಿಯ ಅನೇಕ ಕಾವ್ಯಗುಣಗಳನ್ನು ಆಶಿಸಿದ್ದಲ್ಲದೆ, ಸ್ವತಃ ಜನ್ನನೇ ತನ್ನ ಕಾವ್ಯ ಕಲ್ಪನೆಯನ್ನು ಅನೇಕ ಸಲ ಹೇಳಿಕೊಂಡಿದ್ದಾನೆ. ಅವನ ಪ್ರಕಾರ ತನ್ನ ಕಾವ್ಯವೆಂದರೆ ಇತರ ಬಣಗು ಕವಿಗಳ ಕಾವ್ಯದ ಹಾಗೆ 'ಚಂದದ ಬಳ್ಳಿ ಸಂಕಲೆಯೊಳ್ ಅಕ್ಕರಮಂ ಸೆಱಗೆಯ್ವ ಕಕ್ಕಸರ' ವೃತ್ತಿಯಲ್ಲ. ತನ್ನ ಕಾವ್ಯವೆಂದರೆ 'ಚಂದನ ಪಂಕದೊಳ್ ಪರಿಮಳಂ ಮೆಱೆವಂತಿರೆ ಬಂಧದೊಳ್ ರಸಸ್ಯಂದಿ'ಯಾದುದು. ಅಷ್ಟೇ ಅಲ್ಲದೆ, ಜನ್ನನಿಗೆ ತಾನು ಕೇವಲ ಅಸಹಾಯ ಸುಕವಿಯಷ್ಟೇ ಅಲ್ಲದೆ, ವೈಯಾಕರಣಿಯೂ ಆಗಿದ್ದೇನೆಂಬ ಹೆಮ್ಮೆಯಿದೆ ಈ ಮಾತನ್ನು ಕೂಡ ಅವನು ಒಂದಲ್ಲ ಎರಡು ಸಲ ಹೇಳಿಕೊಳ್ಳುತ್ತಾನೆ :—

'ನವ ವೈಯಾಕರಣಂ; ತರ್ಕ ವಿನೋದಂ'

ಅಲ್ಲದೆ,

'ರನ್ನಂ ವೈಯಾಕರಣಂ; ಜನ್ನಂ ಮೇಣ್
ಕವಿಗಳೊಳಗೆ ವೈಯಾಕರಣಂ'

ಜನ್ನನ ಕಾವ್ಯದಲ್ಲಿಯ ವ್ಯಾಕರಣಾಂಶವನ್ನು ನಾವು ಅಷ್ಟಾಗಿ ಗುರುತಿಸದಿದ್ದರೂ ಅವನ ಕಾವ್ಯಗುಣಗಳನ್ನಾದರೂ ಸ್ಪಷ್ಟವಾಗಿ ಕಾಣುವಂತಿದೆ.

ಜನ್ನನು ತನ್ನ ಕಥನಕ್ಕಾಗಿ ಆರಿಸಿದ ಛಂದಸ್ಸನ್ನೇ ನಿರೀಕ್ಷಿಸಿದರೆ, ಅವನು ಇಷ್ಟು ಸಲೀಲವಾಗಿ ಸಾಧಿಸಿದ ಶ್ರೇಯಸ್ಸು ಅದ್ಭುತವೆಂದೇ ಹೇಳಬೇಕು. ಯಾಕಂದರೆ, ಕೇವಲ ಪರಿಮಿತವಾದ ಮಾತ್ರೆಗಳಿರಬೇಕಾದ

ಕಂದಪದ್ಯದಲ್ಲಿ ರಗಳೆವೃತ್ತಗಳಲ್ಲಿಯಷ್ಟು ಕಥನವನ್ನು ವಿವರಿಸಲು ಕವಿಗೆ ಸ್ವಾತಂತ್ರ್ಯ–ಸಲೀಲತೆಗಳಿಲ್ಲ. ಹೀಗಿದ್ದರೂ, ಜನ್ನನ ವಿಚಾರ–ಲಹರಿಯು ಎಲ್ಲಿಯೂ ಊನವಾದಂತಾಗಲೀ, ಮೊಟಕಾದಂತಾಗಲೀ ಕಾಣದೆ, ಪ್ರತಿ ಕಂದ ಭಾಗದಲ್ಲಿ ಪರಿಪೂರ್ಣವಾಗಿರುವದನ್ನು ನೆನೆದಾಗ ನಿಜವಾಗಿಯೂ ಅವನು ಸಾಧಿಸಿದ ಶ್ರೇಯಸ್ಸಿನ ಕಲ್ಪನೆ ಬರುತ್ತದೆ. ಒಂದು ಕಂದಪದ್ಯದ ಬಾಲಕ್ಕೆ ನೇತುಬಿದ್ದು ಮುಂದಿನ ಪದ್ಯಕ್ಕೆ ಜೀಕಿ, ಅರ್ಥವನ್ನು ಹಚ್ಚಿಕೊಳ್ಳ ಬೇಕಾದ ಸಂದರ್ಭಗಳು ಜನ್ನನಲ್ಲಿ ತೀರ ವಿರಳ. ಹೀಗಾಗಿ, ಸಂಪೂರ್ಣ ವಾಗಿ ಕಂದ ಪದ್ಯಗಳ ಮೂಲಕವಾಗಿಯೇ ಇಂಥ ಆವೇಶ ಮತ್ತು ತತ್ವ–ಜ್ಞಾನಗಳುಳ್ಳ ಕಥಾನಕವನ್ನು ನಡೆಸಿಕೊಂಡು ಹೋದದ್ದು ಕವಿಗೆ ಕೀರ್ತಿ ಯನ್ನು ತರುವಂತಿದೆ.

ಅದರಂತೆಯೇ, ಜನ್ನನ ಅಲಂಕಾರಗಳೂ ಕೂಡ ತುಂಬಾ "ರಸ–ಸ್ಯಂದಿ" ಯಾಗಲು ಸಹಾಯಕವಾಗಿವೆಯೇ ವಿನಾ, ಹಠಕ್ಕಾಗಲೀ, ಕೇವಲ ಕವಿಸಮಯದ ಆಜ್ಞಾಧಾರಣೆಗಾಗಲೀ ಬಂದವು ತೀರ ವಿರಳ. "ನರೆಯೆಂಬ ಹೊಱಸು" "ಮೊಗವೆಂಬ ಅರಮನೆ"ಯಂಥ ಕಲ್ಪನೆಗಳೂ; ಕೇವಲ ಶ್ಲೇಷಕ್ಕಾಗಿ, "ವಿಸರುಹದಂತೆ ಕೇಸರವನಾಂತು" "ರಾಧೆಯಂತೆ ಸಂದಿಸಿ ಮುಡಿಮೇಲೆ ಕೊಂಕಿದ" ಪ್ರಯೋಗಗಳೂ ಕಡಿಮೆ. ಅಷ್ಟೇ ಅಲ್ಲದೆ, ಎಲ್ಲಿ ನೋಡಿದಲ್ಲಿ ಜನ್ನನ ಉಪಮೆ ಉತ್ಪ್ರೇಕ್ಷೆಗಳು ಸಹಜವಾಗಿಯೂ ಅನಾಯಾಸವಾಗಿಯೂ ಹೊಂದಿಕೊಳ್ಳುತ್ತವೆ.

ಹೀಗಾಗಿ ಚಂಡಮಾರಿಯ ಗುಡಿಯ ಪೌಳಿಯಲ್ಲಿ ತೆತ್ತಿಸಿಮೆರೆದ ನರ ಶಿರಗಳು ತಮ್ಮ ಅನೇಕ ಮುಖಗಳಿಂದ ಹೊರಗಿನ ಜೀವರಾಶಿಗಳನ್ನು ನೋಡುತ್ತಿರುವವೇನೋ ಎನ್ನುವಂತೆ ಕಾಣುತ್ತವೆ; ರಾತ್ರಿ ಶಯ್ಯಾಗೃಹದಲ್ಲಿ ಮಲಗಿರುವಾಗ ಅರಸನ ತೆಕ್ಕೆಯಿಂದ ಮೆಲ್ಲನೆ ತಪ್ಪಿಸಿಕೊಂಡು ಹೋಗುವ ಅಮೃತಮತಿ "ಪಱಮೆ ಪಗಲ್ ಮುಗಿಯೆ ಸಿಲ್ಕಿ ಕೈರವದಿಂ ಇರುಳ್ ಪೊಱಮಡುವಂತೆ" ಹೊರಬೀಳುತ್ತಾಳೆ. ಅಮೃತಮತಿಯನ್ನು ಬೆನ್ನಟ್ಟಿ ಹೋಗುವ ಅರಸನು "ಸಂದಿಸುವ ದಂಷದಂತೆ" ಹೋಗುತ್ತಾನೆ. ಯಶೋಮತಿಯ ಧವಳಾಗಾರದಿಂದ ಸತ್ತು ನೆಲಕ್ಕೆ ಬೀಳುವ ನವಿಲು ಸುಧಾಂಶು ಬಿಂಬದ ಕೊರಲಿಂದ ಪಚ್ಚೆಯ ಪದಕಂ ಬೀಳ್ವಂತೆ ಬೀಳುತ್ತದೆ. ಈ

ವರ್ಣನೆಗಳಲ್ಲೆಲ್ಲ ಬರುವ ಸಾದೃಶ್ಯದ ಚೆಲುವಿಕೆಯನ್ನೂ. ಸುಂದರ ಚಿತ್ರಣ ವನ್ನೂ ಮರೆಯುವಂತಿಲ್ಲ.

ಅಷ್ಟೇ ಅಲ್ಲದೆ, ಈ ಸಾದೃಶ್ಯಗಳು ಎಷ್ಟೋ ಸಲ ಸಾಮಾನ್ಯ ಜೀವನ ದಿಂದಲೂ ಬಂದಿವೆ. "ನರ್ಮದೆಯಿಂಗೆಂಟದು" "ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱ" ಮೊದಲಾದವುಗಳಲ್ಲಿ ಇದನ್ನು ಕಾಣ ಬಹುದು.

ಇದರಂತೆಯೇ ಜನ್ನನಲ್ಲಿ ತಾಯ್ನೆಲದಿಂದ ಬಂದ ಲೋಕೋಕ್ತಿ ಗಳೇನೂ ಇಲ್ಲದಿಲ್ಲ. ಬೇಡಿದ ಕಾಡೊಳ್ ಮಳೆಯಾಯ್ತು; ಸೊರ್ಕಿದ ಗೂಳಿ ತಾಯನೇರಿತ್ತು; ಅವಿವೇಕದೆ ಶಾಂತಿಯಂ ಮಾಡೆ ಬೇತಾಳಂ ಮೂಡುವ ತೆಱದೆ— ಮೊದಲಾದ ಪ್ರಯೋಗಗಳಲ್ಲಿ ಇದನ್ನು ಕಾಣ ಬಹುದು.

ಆದರೂ ಜನ್ನನಿಗೆ ಸಂಸ್ಕೃತ ಬರೆವಣಿಗೆಯ ರೀತಿ, ಇಲ್ಲವೆ ಸಂಸ್ಕೃತ ಅವತರಣಿಕೆಗಳೆಂದರೆ ಹೆಚ್ಚು ಮೆಚ್ಚು. ಪ್ರಸಂಗ ಬಂದಾಗ ಜನ್ನ ವಿಯು ಸುಂದರ ಕನ್ನಡ ಶೈಲಿಯನ್ನೂ ಕೊಡಬಲ್ಲ. ಆದರೂ, ಸಾಮಾನ್ಯವಾಗಿ ಅವನಿಗೆ ಸಂಸ್ಕೃತ ಬಿಡಲಾಗದು. ಮುದ್ದಣನ ಲೋಕೋಕ್ತಿಗಳೆಲ್ಲ ಸಾಮಾನ್ಯವಾಗಿ ಶುದ್ಧ ಕನ್ನಡದಿಂದ ಬಂದಿದ್ದರೆ, ಜನ್ನನ ಅವತರಣಿಕೆಗಳಿಗೆ ಸಂಸ್ಕೃತ ಪ್ರಪಂಚವೇ ಮೂಲ ಧನ. ಅಘಧ್ವಾಂತೌಘ ಮಧುಪಮಾಲಿಕೆ; ಕೃತನಿತ್ಯದಾನಂ, ಆವೀಕ್ಷಿತಘೃತಂ, ಆಸ್ಪೃಷ್ಟಕಪಿಳಂ, ಸಾರ್ದಂ ಕತಿಪಯ ಪರಿಚಿತ ಪರಿಜನ ಪ್ರಜಯುರುಚಿಯಿಂ ಅರಸಿಯುಂ ಅರಸಂ ಇವನ್ನೂ ಬಿಟ್ಟು ಬಿಡೋಣ. ಕೇವಲ ಅವತರಣಿಕೆಗಳನ್ನೇ ನೋಡಿದರೂ ಈ ಸಂಸ್ಕೃತದೃಷ್ಟಿಗೆ ಯಾವ ದಾರಿದ್ರ್ಯವೂ ಇಲ್ಲ:— ದುರ್ಬಲಸ್ಯಬಲೋ ರಾಜಾ; ಯಥಾರಾಜಾ ತಥಾಪ್ರಜಾ; ಪರಚಿಂತಾಕರ ಏಹಿ ಎನಿಪ್ಪ ಸೂಕ್ತಿ; ಕಿಂ ಮಿತ್ರಮ್ ಯನ್ನಿವರ್ತಯತಿ ಪಾಪಾತ್; ಒಂದೇ ಎರಡೇ? ಇಂಥ ಹತ್ತಾರು ಉದಾಹರಣೆಗಳನ್ನು ಹೇಳಬಹುದು. ಹಲಕೆಲವು ಸಲವಂತೂ, ಈ ಸಂಸ್ಕೃತ ಅವತರಣಿಕೆಗಳು ಕಂದದ ಅರ್ಧಭಾಗವನ್ನೋ ಅಥವಾ ಪೂರ್ಣ ಭಾಗವನ್ನೋ ಆವರಿಸಿ ಬಿಡಬಹುದು; ಅಪಾತ್ರೇರಮತೇ ನಾರೀ ಎಂಬುದು ಸಮನಿಸಿದುದು; ಸಂಸ್ಕಾರ ಶತೇನಾಪಿ ನ ಗೂಥಃ ಕುಂಕುಮಾ